# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಅಕ್ಟೋಬರ್ ೧, ೨೦೧೫ (ಅಶ್ವಯುಜ ೯, ಶಕ ವರ್ಷ ೧೯೩೭)<br>Bengaluru, Thursday, October 1, 2015 (Aashwayuja 9, Shaka Varsha 1937) | ಸಂಚಿಕೆ ೪೦<br>Issue 40 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಡಾ॥ ಚಂದ್ರಶೇಖರ್, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಗಬ್ಬೂರ, ರಾಯಚೂರು ಜಿಲ್ಲೆ ಅವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಆಡಳಿತಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ: ಡಿಪಿಜೆ/ಗುವಿ/ರಾಯಚೂರು/16/14–15 ದಿನಾಂಕ: 26–05–2015,

**ಪ್ರಸ್ತಾವನೆ:**

ಡಾ॥ ಚಂದ್ರಶೇಖರ್ ಅವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ದಿನಾಂಕ: 11–08–2010 ರಂದು ಸೇವೆಗೆ ಸೇರಿದ್ದು, ಪ್ರಾ.ಆ.ಕೇಂದ್ರ, ಗಬ್ಬೂರ, ರಾಯಚೂರು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ದಿನಾಂಕ: 11–06–2012 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದಾರೆ ಹಾಗೂ ಜಾರಿಗೊಳಿಸಲಾಗಿದ್ದ ಕಾರಣ ಕೇಳುವ ನೋಟೀಸಿಗೆ ಉತ್ತರಿಸಿ, 2012–13ನೇ ಶೈಕ್ಷಣಿಕ ಸಾಲಿನಿಂದ ರಾಯಚೂರಿನ ನವೋದಯ ವೈದ್ಯಕೀಯ ಸಂಶೋಧನಾ ಮಹಾವಿದ್ಯಾಲಯದಲ್ಲಿ ಎಂಡಿ(ಜನರಲ್ ಮೆಡಿಸನ್) ಸ್ನಾತಕೋತ್ತರ ವ್ಯಾಸಂಗಕ್ಕೆ ಪ್ರವೇಶ ಪಡೆದಿದ್ದು, ವ್ಯಾಸಂಗದ ಅವಧಿಗೆ ಅಸಾಧಾರಣ ರಜೆ ಮಂಜೂರು ಮಾಡುವಂತೆಯೂ, ವ್ಯಾಸಂಗದ ನಂತರ ಸರ್ಕಾರಿ ಸೇವೆಯಲ್ಲಿ ಮುಂದುವರಿಯಲು ಅವಕಾಶ ನೀಡುವಂತೆಯೂ ವಿನಂತಿಸಿದ್ದಾರೆ. ಆದ್ದರಿಂದ, ಅವರಿಗೆ ವ್ಯಾಸಂಗಕ್ಕೆ ಅನುಮತಿ ನೀಡುವ ಕುರಿತಂತೆ ಮುಂದಿನ ಕ್ರಮವನ್ನು ಕೋರಿ ಮುಖ್ಯ ಆಡಳಿತಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ ಅಪೆಂಡಿಕ್ಸ್–II ಎ II 3(ಎ) ಪ್ರಕಾರ ಪ್ರೊಬೇಷನ್ ಅವಧಿಯನ್ನು ಪೂರ್ಣಗೊಳಿಸದ ಸರ್ಕಾರಿ ನೌಕರನಿಗೆ, ಯಾವುದೇ ಸಂದರ್ಭದಲ್ಲೂ ವ್ಯಾಸಂಗ ರಜೆಯನ್ನು ಮಂಜೂರು ಮಾಡತಕ್ಕದ್ದಲ್ಲ. ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದನ್ನು ಗಮನಿಸಿದ ಸರ್ಕಾರವು, ಅವರನ್ನು ಕರ್ನಾಟಕ ನಾಗರಿಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1) ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 251 ಹೆಚ್ಎಸ್ಹೆಚ್ 2015 ಬೆಂಗಳೂರು, ದಿನಾಂಕ: 26–06–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಚಂದ್ರಶೇಖರ್, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಗಬ್ಬೂರ, ರಾಯಚೂರು ಜಿಲ್ಲೆ ಅವರು ಖಾಯಂ ಪೂರ್ವ ಸೇವಾವಧಿಯಲ್ಲಿ 11–06–2012 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುವ ಕಾರಣ ಅವರು ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರಿಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1) ರಡಿಯಲ್ಲಿ ಅವರನ್ನು ದಿನಾಂಕ: 11–06–2012 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**P.R-401**

**S.C-10**

## ಸಹಕಾರ ಸಚಿವಾಲಯ

**ವಿಷಯ** : 2015–16ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರ ನೋಂದಾವಣೆ ಶುಲ್ಕವನ್ನು ಪರಿಷ್ಕರಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಸಿಒ 80 ಸಿಎಲ್‌ಎಸ್ 2015, ದಿನಾಂಕ: 19–03–2015

2. ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಕರ್ನಾಟಕ ಅನುಸೂಚಿತ ಜಾತಿ / ಬುಡಕಟ್ಟು ಉಪ ಯೋಜನೆ ಅಧಿನಿಯಮ 2013ರ ಪ್ರಕಾರ ಅನುಸೂಚಿತ ಜಾತಿ / ಬುಡಕಟ್ಟು ಪಂಗಡಗಳ ಅಭಿವೃದ್ಧಿ ಪರಿಷತ್ ಸಭೆಯಲ್ಲಿ ನಡೆದ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಸರ್ಕಾರದ ಆದೇಶದ ಮಾರ್ಗಸೂಚಿ–15ರಲ್ಲಿ 2015–16ನೇ ಸಾಲಿನಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರು ವಂತಿಗೆಯಾಗಿ ತಲಾ ರೂ. 510/– ಪಾವತಿಸಬೇಕು ಉಳಿದ ರೂ. 200/–ಗಳನ್ನು ಸರ್ಕಾರದಿಂದ ಸಹಾಯಧನವಾಗಿ ಪಾವತಿಸಲಾಗುವುದೆಂದು ತಿಳಿಸಲಾಗಿತ್ತು.

ಓದಲಾದ (2)ರಲ್ಲಿನ ನಡವಳಿಗಳಂತೆ ಯಶಸ್ವಿನಿ ಯೋಜನೆಯಡಿ ಸದಸ್ಯತ್ವ ಪಡೆಯಲು ನಗರ ಪ್ರದೇಶದಲ್ಲಿ ರೂ. 110/– ಮತ್ತು ಗ್ರಾಮೀಣ ಪ್ರದೇಶದಲ್ಲಿ ರೂ. 50/–ಗಳು ಫಲಾನುಭವಿಯ ವಂತಿಕೆಯಾಗಿರುತ್ತದೆ. ಉಳಿದ ಮೊತ್ತವನ್ನು ಪರಿಶಿಷ್ಟ ಜಾತಿ ಉಪ ಯೋಜನೆ / ಗಿರಿಜನ ಉಪ ಯೋಜನೆ ಅನುದಾನದಿಂದ ಭರಿಸಲು ಪ್ರಸ್ತಾಪಿಸಲಾಗಿರುತ್ತದೆ.

ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 234 ವೆಚ್ಚ–2/2015, ದಿನಾಂಕ: 02–07–2015ರಲ್ಲಿ ನಗರ ಯಶಸ್ವಿನಿ ಯೋಜನೆಯಡಿ SC/ST ಫಲಾನುಭವಿಗಳು ಸದಸ್ಯತ್ವದ ನೋಂದಣಿ ವಂತಿಗೆಯಾಗಿ ಸದಸ್ಯರು ಪಾವತಿಸುವ ರೂ. 110/–ಗಳನ್ನು ಹೊರತುಪಡಿಸಿ, ಉಳಿದ ಮೊತ್ತವನ್ನು ಸರ್ಕಾರದಿಂದ ಪಾವತಿಸಲು SCP/TSP Component ಮಿತಿಯೊಳಗೆ ಭರಿಸುವ ಷರತ್ತಿಗೆ ಒಳಪಟ್ಟು ಆರ್ಥಿಕ ಇಲಾಖೆಯು ಸಹಮತಿಸಿರುತ್ತದೆ. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನಗರ ಯಶಸ್ವಿನಿ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನ ನೋಂದಾಯಿಸಿಕೊಳ್ಳಲು ಸರ್ಕಾರದಿಂದ ಸಹಾಯ ಧನ ರೂ. 200/– ಭರಿಸಲಾಗುವುದು ಎಂಬುದನ್ನು ರೂ. 600/–ಗಳನ್ನು ಭರಿಸಲಾಗುವುದು ಎಂದು ಬದಲಾಯಿಸಿ ಈ ಕೆಳಕಂಡ ಮಾರ್ಪಾಟು ಮಾಡಿ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 153 ಸಿಎಲ್‌ಎಸ್ 2015 ಬೆಂಗಳೂರು ದಿನಾಂಕ: 16–07–2015**

ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ 2015–16ನೇ ಸಾಲಿನಲ್ಲಿ ನಗರ ಸಹಕಾರ ಸಂಘದ ಸದಸ್ಯರು ಮತ್ತು ಅವರ ಕುಟುಂಬ ವರ್ಗದವರು ನೋಂದಾಯಿಸಿಕೊಳ್ಳಲು ಅನುವಾಗುವಂತೆ ಮಾರ್ಗಸೂಚಿ 15ನ್ನು ತಿದ್ದುಪಡಿ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

| ಸಂಖ್ಯೆ | ಪ್ರಸ್ತುತ ಇರುವ ಅವಕಾಶ | ಮಾರ್ಪಡಿಸಿದ ಅವಕಾಶ |
|---|---|---|
| ಮಾರ್ಗ ಸೂಚಿ ಸಂಖ್ಯೆ 15 | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರು ರೂ. 510/– ಮಾತ್ರ ಪಾವತಿಸಬೇಕು ಉಳಿದ ರೂ.200/–ಗಳನ್ನು ಸರ್ಕಾರದಿಂದ ಸಹಾಯ ಧನವಾಗಿ ಪಾವತಿಸಲಾಗುವುದು. | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರು ರೂ. 110/– ಮಾತ್ರ ಪಾವತಿಸಬೇಕು ಉಳಿದ ರೂ. 600/–ಗಳನ್ನು ಸರ್ಕಾರದಿಂದ ಸಹಾಯ ಧನವಾಗಿ ಪಾವತಿಸಲಾಗುವುದು. |

ಮೇಲ್ಕಂಡ ತಿದ್ದುಪಡಿಯನ್ನು ಹೊರತುಪಡಿಸಿ ಓದಲಾದ (1)ರ ಆದೇಶದಲ್ಲಿ ಮತ್ಯಾವುದೇ ಬದಲಾವಣೆ ಇರುವುದಿಲ್ಲ.

ಪ್ರಸಕ್ತ ಸಾಲಿನಲ್ಲಿ ಈಗಾಗಲೇ ರೂ. 510/–ಗಳನ್ನು ಪಾವತಿಸಿ ನೋಂದಾಯಿಸಲ್ಪಟ್ಟಿರುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರಿಗೆ ವ್ಯತ್ಯಾಸದ ಮೊತ್ತವನ್ನು ಸಂಬಂಧಿಸಿದ ಸಹಕಾರ ಸಂಘಗಳು / ಸಂಸ್ಥೆಗಳು ಹಿಂದಿರುಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 234 ವೆಚ್ಚ 2/2015, ಆರ್ಥಿಕ ಇಲಾಖೆ (ವೆಚ್ಚ–2), ದಿನಾಂಕ: 02–07–2015ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R-440**
**S.C-500**

## ಇಂಧನ ಸಚಿವಾಲಯ

**ವಿಷಯ** : 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ / ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ: 15–03–2005.

2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ: 04–09–2008.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ: 17–05–2013.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ: 13–05–2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ / ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ರೂ. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ರೂ. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಬಾಕಿ ರೂ. 106.54 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.
4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ. 7197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಆಯೋಗದ ದರ ಆದೇಶ 2013ರಲ್ಲಿ, 2011–12ನೇ ಸಾಲಿಗೆ ರೂ. 443.49 ಕೋಟಿಗಳ ಹೆಚ್ಚುವರಿ ಸಹಾಯಧನವನ್ನು ಅನುಮೋದಿಸಿದೆ. ಆಯೋಗದ ದರ ಆದೇಶ 2014ರಲ್ಲಿ 2014–15ನೇ ಸಾಲಿಗೆ ರೂ. 6391.56 ಕೋಟಿಗಳನ್ನು ಅನುಮೋದಿಸಿದ್ದು, ಇದರಲ್ಲಿ ರೂ. 408.56 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.
5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 400.00 ಕೋಟಿಗಳನ್ನು, 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ರೂ. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 469 ವೆಚ್ಚ–1/2015 ದಿನಾಂಕ: 28–04–2015ರಲ್ಲಿ ಸಹಮತಿ ನೀಡಿದೆ.
6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–07ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 7498.00 ಕೋಟಿಗಳನ್ನು ಒದಗಿಸಲಾಗಿದೆ.
7. ಏಪ್ರಿಲ್–2015ರ ಮಾಹೆಗೆ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 400.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಏಪ್ರಿಲ್–2015ರ ಮಾಹೆಗೆ ಒಟ್ಟು ಬಿಡುಗಡೆ | 424.89 |

ರೂ. 424.89 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 29–04–2015.**

**1.** ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಏಪ್ರಿಲ್ 2015ರ ಮಾಹೆಗೆ ರೂ. 400.00 ಕೋಟಿಗಳ (ರೂ. ನಾಲ್ಕುನೂರು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)" ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| ವಿದ್ಯುತ್ ಸರಬರಾಜು ಕಂಪನಿಗಳು | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳಿಗೆ | 2015–16ರ ಏಪ್ರಿಲ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 47.50 | 2.50 | **50.00** |
| ಮವಿಕಂ | 26.50 | 0.50 | **27.00** |

| | | | |
|---|---|---|---|
| ಹುವಿಕಂ | 153.00 | 4.00 | **157.00** |
| ಗುವಿಕಂ | 84.50 | 5.50 | **90.00** |
| ಚಾವಿಸನಿನಿ | 68.50 | 1.50 | **70.00** |
| ಹು.ಗ್ರಾ.ಸ.ಸಂ | 6.00 | 0.00 | **6.00** |
| **ಒಟ್ಟು** | **386.00** | **14.00** | **400.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15 ಸಾಲಿನ ಸಹಾಯಧನ ಬಾಬ್ತು ಕ್ರಮವಾಗಿ ರೂ. 5.35 ಕೋಟಿ ಹಾಗೂ ರೂ. 10.66 ಕೋಟಿಗಳನ್ನು ಏಪ್ರಿಲ್–2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| **ವಿಸಕಂಗಳು** | **2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು** | **2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು** | **ಒಟ್ಟು** |
|---|---|---|---|
| ಬೆವಿಕಂ | 1.00 | 1.85 | 2.85 |
| ಮವಿಕಂ | 1.00 | 1.00 | 2.00 |
| ಹುವಿಕಂ | 0.00 | 3.56 | 3.56 |
| ಗುವಿಕಂ | 2.00 | 2.50 | 4.50 |
| ಚಾವಿಸನಿನಿ | 1.35 | 1.75 | 3.10 |
| ಒಟ್ಟು | 5.35 | 10.66 | 16.01 |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ರೂ. 8.88 ಕೋಟಿಗಳನ್ನು ಏಪ್ರಿಲ್–2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| **ವಿಸಕಂಗಳು** | **ಒಟ್ಟು** |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4.ಮೇಲಿನ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| ವಿದ್ಯುತ್ ಸರಬರಾಜು ಕಂಪನಿಗಳು | ಏಪ್ರಿಲ್–2015ರ ಮಾಹೆಗೆ ಸಹಾಯಧನ ಬಿಡುಗಡೆ | | ಏಪ್ರಿಲ್–2015ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ವಿಸಕಂಗಳಿಗೆ ಬಿಡುಗಡೆ | | | | ಭಾ.ಜ್ಯೋ/ಕು.ಜ್ಯೋ ಬಾಕಿ ಮನ್ನಾ ಬಾಬ್ತು ಏಪ್ರಿಲ್–2015ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆವಿಕಂ | 50.00 | 0.00 | 50.00 | 1.00 | 1.85 | * 2.85 | * 2.50 | 55.35 | 0.00 | 55.35 |
| ಮವಿಕಂ | 27.00 | 0.00 | 27.00 | 1.00 | 1.00 | * 2.00 | * 1.00 | 30.00 | 0.00 | 30.00 |
| ಹುವಿಕಂ | 110.00 | 47.00 | 157.00 | 0.00 | 3.56 | 3.56 | 2.00 | 110.00 | 52.56 | 162.56 |
| ಗುವಿಕಂ | 70.00 | 20.00 | 90.00 | 2.00 | 2.50 | 4.50 | 0.50 | 70.00 | 25.00 | 95.00 |

| | | | | | | | | | | |
|---|---|---|---|---|---|---|---|---|---|---|
| ಚಾವಿಸನಿನಿ | 50.00 | 20.00 | 70.00 | 1.35 | 1.75 | 3.10 | 2.88 | 50.00 | 25.98 | 75.98 |
| ಹು.ಗ್ರಾ.ಸ.ಸಂ | 0.00 | 6.00 | 6.00 | 0.00 | 0.00 | 0.00 | 0.00 | 0.00 | 6.00 | 6.00 |
| ಒಟ್ಟು | 307.00 | 93.00 | 400.00 | 5.35 | 10.66 | 16.01 | 8.88 | 315.35 | 109.54 | 424.89 |

*ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ರೂ. 6.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 315.35 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 58.56 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 25.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ. 25.98 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು, ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

8. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

9. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

10. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ / ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ / ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

11. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 469ವೆಚ್ಚ–1/2015 ದಿನಾಂಕ: 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R-441**

## ಇಂಧನ ಸಚಿವಾಲಯ

**ವಿಷಯ** : ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ** : 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ: 31–05–2002.

2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ: 19–12–2002.

3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2015 ದಿನಾಂಕ: 09–04–2015.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002 ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ

ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2015–16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ.

4. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015–16ನೇ ಸಾಲಿನ ಏಪ್ರಿಲ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 45.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 9 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 02–05–2015**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಏಪ್ರಿಲ್ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 45.00 ಕೋಟಿ (ನಲವತ್ತೈದು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 470 Exp-1 2015 ದಿನಾಂಕ: 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R-442**

## ಇಂಧನ ಸಚಿವಾಲಯ

**ವಿಷಯ** : 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ: 15–03–2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ: 04–09–2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ: 17–05–2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ: 29–04–2015.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳೂ 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ: 13–05–2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ / ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ರೂ. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ರೂ. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ರೂ. 106.54 ಕೋಟಿಗಳನ್ನು

ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಕ್ರಮಾಂಕ-(4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 8.88 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ರೂ. 97.66 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015-16ನೇ ಸಾಲಿಗೆ ರೂ. 7197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶದಲ್ಲಿ 2015-16ನೇ ಸಾಲಿನ ಏಪ್ರಿಲ್-2015ರ ಮಾಹೆಗೆ ಸಹಾಯಧನ ರೂ. 400.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

ಆಯೋಗದ ದರ ಆದೇಶ 2013ರಲ್ಲಿ 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ರೂ. 443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶದಲ್ಲಿ ರೂ. 5.35 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ರೂ. 438.14 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

2014-15ನೇ ಸಾಲಿನ ಬಾಕಿ ಸಹಾಯಧನ ರೂ. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶದಲ್ಲಿ ರೂ. 10.66 ಕೋಟಿಗಳನ್ನು ಬಿಡುಗಡೆ ಮಾಡಿ ಇನ್ನು ರೂ. 397.90 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015-16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 400.00 ಕೋಟಿಗಳನ್ನು, 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014-15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ರೂ. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಎಫ್‌ಡಿ 469 ವೆಚ್ಚ-1/2015 ದಿನಾಂಕ: 28-04-2015ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015-16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ-7ರ ಪುಟ ಸಂಖ್ಯೆ-78ರಲ್ಲಿ ಲೆಕ್ಕಶೀರ್ಷಿಕೆ "2801-80-101-1-04-106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 7498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ-(4)ರಲ್ಲಿನ ಸರ್ಕಾರಿ ಆದೇಶದಲ್ಲಿ ಒಟ್ಟು ರೂ. 424.89 ಕೋಟಿಗಳನ್ನು ಬಿಡುಗಡೆ ಮಾಡಿದೆ.

7. ಮೇ-2015ರ ಮಾಹೆಗೆ ಸಹಾಯಧನ, ಬಾಕಿ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳು**

| | |
|---|---|
| 2015-16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 400.00 |
| 2011-12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014-15ನೇ ಸಾಲಿನ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಮೇ-2015ರ ಮಾಹೆಗೆ ಒಟ್ಟು ಬಿಡುಗಡೆ | 424.89 |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 18-05-2015.**

1. ಸರ್ಕಾರವು ಭಾಗ್ಯಜ್ಯೋತಿ / ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015-16ನೇ ಸಾಲಿನ ಮೇ 2015ರ ಮಾಹೆಗೆ ರೂ. 400.00 ಕೋಟಿಗಳ (ರೂ. ನಾಲ್ಕುನೂರು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801-80-101-1-04-106" (ಸಹಾಯಧನ) (ಯೋಜನೇತರ)ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| **ವಿದ್ಯುತ್ ಸರಬರಾಜು ಕಂಪನಿಗಳು** | **10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ** | **ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳಿಗೆ** | **2015-16ರ ಮೇ ಮಾಹೆಗೆ ಬಿಡುಗಡೆ** |
|---|---|---|---|
| ಬೆವಿಕಂ | 18.00 | 2.00 | **20.00** |
| ಮವಿಕಂ | 26.00 | 1.00 | **27.00** |
| ಹುವಿಕಂ | 171.00 | 4.00 | **175.00** |

| | | | |
|---|---|---|---|
| ಗುವಿಕಂ | 89.50 | 5.50 | **95.00** |
| ಚಾವಿಸನಿನಿ | 75.00 | 2.00 | **77.00** |
| ಹು.ಗ್ರಾ.ಸ.ಸಂ | 6.00 | 0.00 | **6.00** |
| **ಒಟ್ಟು** | **385.50** | **14.50** | **400.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಕ್ರಮವಾಗಿ ರೂ. 5.35 ಕೋಟಿ ಹಾಗೂ ರೂ. 10.66 ಕೋಟಿಗಳನ್ನು ಮೇ–2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| **ವಿಸಕಂಗಳು** | **2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು** | **2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು** | **ಒಟ್ಟು** |
|---|---|---|---|
| ಬೆವಿಕಂ | 1.00 | 1.85 | **2.85** |
| ಮವಿಕಂ | 1.00 | 1.00 | **2.00** |
| ಹುವಿಕಂ | 0.00 | 3.56 | **3.56** |
| ಗುವಿಕಂ | 2.00 | 2.50 | **4.50** |
| ಚಾವಿಸನಿನಿ | 1.35 | 1.75 | **3.10** |
| **ಒಟ್ಟು** | **5.35** | **10.66** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ರೂ. 8.88 ಕೋಟಿಗಳನ್ನು ಮೇ–2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| **ವಿಸಕಂಗಳು** | **ಒಟ್ಟು** |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| ವಿದ್ಯುತ್ ಸರಬರಾಜು ಕಂಪನಿಗಳು | ಮೇ–2015ರ ಮಾಹೆಗೆ ಸಹಾಯಧನ ಬಿಡುಗಡೆ | | | ಮೇ–2015ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ವಿಸಕಂಗಳಿಗೆ ಬಿಡುಗಡೆ | | | ಭಾ.ಜ್ಯೋ/ಕು.ಜ್ಯೋ ಬಾಕಿ ಮನ್ನಾ ಬಾಬ್ತು ಮೇ–2015ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿ.ಸ.ಕಂ.ಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆವಿಕಂ | 20.00 | 0.00 | **20.00** | 1.00 | 1.85 | * **2.85** | * 2.50 | 25.35 | 0.00 | **25.35** |
| ಮವಿಕಂ | 27.00 | 0.00 | **27.00** | 1.00 | 1.00 | * **2.00** | * 1.00 | 30.00 | 0.00 | **30.00** |
| ಹುವಿಕಂ | 150.00 | 25.00 | **175.00** | 0.00 | 3.56 | **3.56** | 2.00 | 150.00 | 30.56 | **180.56** |

| | | | | | | | | | | |
|---|---|---|---|---|---|---|---|---|---|---|
| ಗುವಿಕಂ | 80.00 | 15.00 | **95.00** | 2.00 | 2.50 | **4.50** | 0.50 | 80.00 | 20.00 | **100.00** |
| ಚಾವಿಸನಿನಿ | 62.00 | 15.00 | **77.00** | 1.35 | 1.75 | **3.10** | 2.88 | 62.00 | 20.98 | **82.98** |
| ಹು.ಗ್ರಾ.ಸ.ಸಂ | 0.00 | 6.00 | **6.00** | 0.00 | 0.00 | **0.00** | 0.00 | 0.00 | 6.00 | **6.00** |
| **ಒಟ್ಟು** | **339.00** | **61.00** | **400.00** | **5.35** | **10.66** | **16.01** | **8.88** | **347.35** | **77.54** | **424.89** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ರೂ. 6.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.
6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 347.35 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 36.56 ಕೋಟಿಗಳನ್ನು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 20.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ. 20.98 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
8. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
9. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
10. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
11. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 469ವೆಚ್ಚ–1/2015 ದಿನಾಂಕ: 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R-443**

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ : 09–04–2015.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 9 ಪಿಎಸ್‌ಆರ್ 2015, ದಿನಾಂಕ : 02–05–2015.
5. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ : ಕೆಇಪಿಜಿಟಿ/ಪಿ14/2015–16/79–83, ದಿನಾಂಕ: 04–05–2015.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ

ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2015–16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ರೂ. 45.00 ಕೋಟಿಗಳನ್ನು ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.
4. ಮೇಲೆ (5)ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ನ ಪತ್ರದಲ್ಲಿ ಏಪ್ರಿಲ್ ಮತ್ತು ಮೇ–2015ರ ಮಾಹೆಗೆ ಒಟ್ಟು ರೂ. 150.00 ಕೋಟಿಗಳನ್ನು ಮೇ ಮೊದಲ ವಾರದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015–16ನೇ ಸಾಲಿನ ಮೇ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 9 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ : 18–05–2015.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಮೇ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ. 46.00 ಕೋಟಿ (ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 02 ಟಿಎಫ್‌ಪಿ 2015 ಬೆಂಗಳೂರು ದಿನಾಂಕ : 09–04–2015ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

P.R. 444

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Trpartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 34 ಪಿಎಸ್‌ಆರ್ 2013, ದಿನಾಂಕ : 17–05–2013.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 6 ಪಿಎಸ್‌ಆರ್ 2015, ದಿನಾಂಕ : 29–04–2015, ಮತ್ತು 18–05–2015.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ : 01–08–2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊತ್ತವನ್ನು ಸರ್ಕಾರದಿಂದ ಮರುಪಾವತಿ ಮಾಡುವುದಕ್ಕೆ ಅನುಮೋದನೆ ನೀಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ. 7197.16 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗದಿಪಡಿಸಿದೆ. ಆಯೋಗದ ದರ ಆದೇಶ 2013ರಲ್ಲಿ, 2011–12ನೇ

ಸಾಲಿಗೆ ರೂ. 443.49 ಕೋಟಿಗಳಷ್ಟು ಹೆಚ್ಚುವರಿ ಸಹಾಯಧನವನ್ನು ಅನುಮೋದಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2014ರ ದರ ಆದೇಶದಲ್ಲಿ 2014–15ನೇ ಸಾಲಿಗೆ ರೂ. 6391.56 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿತ್ತು. ಇದರಲ್ಲಿ ರೂ. 5983.00 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನೂ ರೂ. 408.56 ಕೋಟಿಗಳ ಬಾಕಿ ಸಹಾಯಧನ ಬಿಡುಗಡೆ ಮಾಡಬೇಕಾಗಿದೆ.

4. ಆರ್ಥಿಕ ವರ್ಷ 2015–16ನೇ ಸಾಲಿನ ಆಯವ್ಯಯದಲ್ಲಿ ರೂ. 7498.00 ಕೋಟಿಗಳನ್ನು ಒದಗಿಸಿದೆ. 2015ರ ಮೇ 18ನೆ ತಾರೀಖಿನವರೆಗೂ ಮೇಲಿನ ಉಲ್ಲೇಖ (4)ರ ಆದೇಶಗಳಲ್ಲಿ ರೂ. 849.78 ಕೋಟಿಗಳನ್ನು ಈಗಾಗಲೇ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ನಗದು ರೂಪದಲ್ಲಿ ಬಿಡುಗಡೆ ಮಾಡಲಾಗಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಏಪ್ರಿಲ್–2015 ರಿಂದ ಮೇ–2015 ವರೆಗೆ ಬಿಡುಗಡೆ ಮಾಡಿರುವ ಸಹಾಯಧನ | 800.00 |
| ದಿನಾಂಕ 13–05–2013ರ ಅಂತ್ಯಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡಸಹಿತ ಬಾಕಿ ಮೊತ್ತದಲ್ಲಿ ಬಿಡುಗಡೆ ಮಾಡಿರುವ ಹಣ. | 17.76 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 10.70 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 21.32 |
| **ಒಟ್ಟು 18–05–2015ರವರೆಗೆ ಬಿಡುಗಡೆ ಮಾಡಿದ ಸಹಾಯಧನ** | **849.78** |

5. 2015–16ನೇ ಸಾಲಿನ ಏಪ್ರಿಲ್ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಹಾಗೂ ರಾಜಧನವನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**ರೂ.ಕೋಟಿಗಳಲ್ಲಿ**

| **ಕ್ರ.ಸಂ.** | **ವಿಸಕಂ** | **ಏಪ್ರಿಲ್–2015** |
|---|---|---|
| 1 | ಬೆವಿಕಂ | 63.26 |
| 2 | ಮವಿಕಂ | 8.15 |
| 3 | ಹುವಿಕಂ | 8.71 |
| 4 | ಗುವಿಕಂ | 6.90 |
| 5 | ಚಾವಿಸನಿನಿ | 8.50 |
| 6 | ಕವಿನಿನಿ | 0.57 |
| | ಒಟ್ಟು | 96.09 |
| 7 | ಕವಿನಿನಿ(ರಾಜಧನ) | 3.91 |
| | **ಒಟ್ಟು** | **100.00** |

**(ಬೆವಿಕಂ ಹೊಂದಾಣಿಕೆಯ ರೂ. 63.26 ಕೋಟಿಗಳಲ್ಲಿ 2014–15ನೇ ಸಾಲಿನ ಬಾಕಿ ತೆರಿಗೆ ರೂ. 35.34 ಕೋಟಿಗಳು ಒಳಗೊಂಡಿದೆ.)**

6. ಮೇಲೆ ವಿವರಿಸಿರುವಂತೆ, ಏಪ್ರಿಲ್–2015ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ರೂ. 100.00 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ. ಆದ್ದರಿಂದ, ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 06 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ : 01–06–2015.**

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು **ರೂ. 95.52 ಕೋಟಿಗಳನ್ನು (ತೊಂಭತ್ತೈದು ಕೋಟಿ ಐವತ್ತೆರೆಡು ಲಕ್ಷ ರೂ.ಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A. ESCOM's PORTION** **(Rs. In Crs)**

| **DEBIT** | | **CREDIT** | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101-1-04-106 | | 0043-00-101-0-01 | |
| BESCOM | 63.26 | BESCOM | 63.26 |

| | | | |
|---|---|---|---|
| MESCOM | 8.15 | MESCOM | 8.15 |
| HESCOM | 8.71 | HESCOM | 8.71 |
| GESCOM | 6.90 | GESCOM | 6.90 |
| CESC | 8.50 | CESC | 8.50 |
| **TOTAL** | **95.52** | **TOTAL** | **95.52** |

ಬೆವಿಕಂ ಹೊಂದಾಣಿಕೆಯ ಮೊತ್ತ ರೂ. 63.26 ಕೋಟಿಗಳಲ್ಲಿ 2013–14ನೇ ಸಾಲಿನ ಬಾಕಿ ತೆರಿಗೆ ರೂ. 35.34 ಕೋಟಿಗಳು ಒಳಗೊಂಡಿದೆ.

2. 2015–16ನೇ ಸಾಲಿನ ಏಪ್ರಿಲ್ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ರೂ. 4.48 ಕೋಟಿಗಳನ್ನು ಸಹ ಸರ್ಕಾರವು 10 ಹೆಚ್‌ಪಿವರೆಗಿನ ನೀರಾವರಿ ಪಂಪ್ ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಗುವಿಕಂ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B. KPCL's PORTION** **(Rs. In Crs)**

| **DEBIT** | | **CREDIT** | |
|---|---|---|---|
| **Head of Account** | **Total Amount** | **Head of Account** | **Total Amount** |
| **Subsidy to ESCOMs** | | **Royalty from KPCL** | |
| 2801-80-101-1-04-106 | | 0801-01-201-0-01 | 3.91 |
| GESCOM | 4.48 | | |
| | | **Electricity Tax** | |
| (KPCL to adjust this receipt against power purchase cost of GESCOM) | | 0043-00-101-0-01 | 0.57 |
| **TOTAL – (B)** | **4.48** | **TOTAL – (B)** | **4.48** |

3. ಲೆಕ್ಕ ಮಹಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.
4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ಮತ್ತು ರಾಜಸ್ವ ರೂ. 4.48 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.
6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10 ಹೆಚ್‌ಪಿವರೆಗಿನ ನೀರಾವರಿ ಪಂಪಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 469 ವೆಚ್ಚ–1/2015 ದಿನಾಂಕ : 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 445

## ಇಂಧನ ಸಚಿವಾಲಯ

**ವಿಷಯ :** 2015–16ನೆ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 34 ಪಿಎಸ್‌ಆರ್ 2013, ದಿನಾಂಕ : 17–05–2013.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 6 ಪಿಎಸ್‌ಆರ್ 2015, ದಿನಾಂಕ : 29–04–2015 ಮತ್ತು 18–05–2015.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ : 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ 13–05–2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ರೂ. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ರೂ. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ರೂ. 106.54 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ರೂ. 17.76 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ರೂ. 88.78 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.
4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ. 7197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ ಮೇ 2015ರವರೆಗೆ ಸಹಾಯಧನ ರೂ. 800.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

   ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ರೂ. 443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 10.75 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ರೂ. 432.74 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

   2014–15ನೇ ಸಾಲಿನ ಬಾಕಿ ಸಹಾಯಧನ ರೂ. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 21.32 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನೂ ರೂ. 387.24 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.
5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 400.00 ಕೋಟಿಗಳನ್ನು, 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ. 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ರೂ. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಎಫ್‌ಡಿ 469 ವೆಚ್ಚ–1/2015 ದಿನಾಂಕ : 28–04–2015ರಲ್ಲಿ ಸಹಮತಿ ನೀಡಿದೆ.
6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 7498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4) ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ರೂ. 849.78 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು | 800–00 |
| 2011–12ನೆ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನದ ಬಾಬ್ತು | 32.02 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು | 17.76 |
| **ಮೇ–2015ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ** | **849.78** |

7. ಜೂನ್–2015ರ ಮಾಹೆಗೆ ಸಹಾಯಧನ, ಬಾಕಿ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ. 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 400.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಜೂನ್–2015ರ ಮಾಹೆಗೆ ಒಟ್ಟು ಬಿಡುಗಡೆ | 424.89 |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 6 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ : 04-06-2015.**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015-16ನೇ ಸಾಲಿನ ಜೂನ್-2015ರ ಮಾಹೆಗೆ ರೂ. 400.00 ಕೋಟಿಗಳ (ರೂ. ನಾಲ್ಕುನೂರು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801-80-101-1-04-106" (ಸಹಾಯಧನ) ಯೋಜನೇತರ ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯ ಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳಿಗೆ | 2015-16ರ ಜೂನ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 34.00 | 3.00 | 37.00 |
| ಮವಿಕಂ | 28.00 | 0.00 | 28.00 |
| ಹುವಿಕಂ | 160.00 | 5.00 | 165.00 |
| ಗುವಿಕಂ | 87.00 | 5.00 | 92.00 |
| ಚಾವಿಸನಿನಿ | 71.00 | 2.00 | 73.00 |
| ಹು.ಗ್ರಾ.ಸ.ಸಂ | 5.00 | 0.00 | 5.00 |
| **ಒಟ್ಟು** | **385.00** | **15.00** | **400.00** |

2. 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014-15ನೇ ಸಾಲಿನ ಸಹಾಯಧನದ ಬಾಬ್ತು ಕ್ರಮವಾಗಿ ರೂ. 5.35 ಕೋಟಿ ಹಾಗೂ ರೂ. 10.66 ಕೋಟಿಗಳನ್ನು ಜೂನ್-2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ವಿಸಕಂಗಳು | 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014-15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು |
|---|---|---|---|
| ಬೆವಿಕಂ | 1.00 | 1.85 | 2.85 |
| ಮವಿಕಂ | 1.00 | 1.00 | 2.00 |
| ಹುವಿಕಂ | 0.00 | 3.56 | 3.56 |
| ಗುವಿಕಂ | 2.00 | 2.50 | 4.50 |
| ಚಾವಿಸನಿನಿ | 1.35 | 1.75 | 3.10 |
| **ಒಟ್ಟು** | **5.35** | **10.66** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ರೂ. 8.88 ಕೋಟಿಗಳನ್ನು ಜೂನ್-2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

| ವಿಸಕಂಗಳು | ಒಟ್ಟು |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

**ರೂ. ಕೋಟಿಗಳಲ್ಲಿ**

| ವಿದ್ಯುತ್ ಸರಬರಾಜು ಕಂಪನಿಗಳು | ಜೂನ್–2015ರ ಮಾಹೆಗೆ ಸಹಾಯಧನ ಬಿಡುಗಡೆ | | | ಜೂನ್–2015ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ವಿಸಕಂಗಳಿಗೆ ಬಿಡುಗಡೆ | | | ಭಾ.ಜ್ಯೋ/ಕು.ಜ್ಯೋ ಬಾಕಿ ಮನ್ನಾ ಬಾಬ್ತು ಜೂನ್–2015ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆವಿಕಂ | 37.00 | 0.00 | 37.00 | 1.00 | 1.85 | *2.85 | *2.50 | 42.35 | 0.00 | **42.35** |
| ಮವಿಕಂ | 28.00 | 0.00 | 28.00 | 1.00 | 1.00 | *2.00 | *1.00 | 31.00 | 0.00 | **31.00** |
| ಹುವಿಕಂ | 115.00 | 50.00 | 165.00 | 0.00 | 3.56 | 3.56 | 2.00 | 115.00 | 55.56 | **170.56** |
| ಗುವಿಕಂ | 77.00 | 15.00 | 92.00 | 2.00 | 2.50 | 4.50 | 0.50 | 77.00 | 20.00 | **97.00** |
| ಚಾವಿಸನಿನಿ | 58.00 | 15.00 | 73.00 | 1.35 | 1.75 | 3.10 | 2.88 | 58.00 | 20.98 | **78.98** |
| ಹು.ಗ್ರಾ.ಸ.ಸಂ | 0.00 | 5.00 | 5.00 | 0.00 | 0.00 | 0.00 | 0.00 | 0.00 | 5.00 | **5.00** |
| **ಒಟ್ಟು** | **315.00** | **85.00** | **400.00** | **5.35** | **10.66** | **16.01** | **8.88** | **323.35** | **101.54** | **424.89** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 115.00 ಕೋಟಿಗಳಲ್ಲಿ ರೂ. 25.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ಮೊತ್ತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

6. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ರೂ. 5.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 323.35 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 60.56 ಕೋಟಿಗಳನ್ನು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 20.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ. 20.98 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

9. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ ಅಸಲು ಬಾಕಿ ಲೆಕ್ಕೀಕರಿಸುವುದು.

10. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

11. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್‌ಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

12. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 469 ವೆಚ್ಚ–1/2015 ದಿನಾಂಕ : 28–04–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 446

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ: 09–04–2015.
4. ಸರ್ಕಾರದ ಆದೇಶ ಸಂಖ್ಯೆ : ಇಎನ್ 9 ಪಿಎಸ್‌ಆರ್ 2015, ದಿನಾಂಕ : 02–05–2015 ಮತ್ತು 18–05–2015
5. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ : ಕೆಇಪಿಜಿಟಿ/ಪಿ14/2015–16/197–201 ದಿನಾಂಕ: 01–06–2015.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2015–16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ರೂ. 91.00 ಕೋಟಿಗಳನ್ನು ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.
4. ಮೇಲೆ (5)ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ನ ಪತ್ರದಲ್ಲಿ ಜೂನ್–2015ರ ಮಾಹೆಗೆ ರೂ. 74.00 ಕೋಟಿಗಳನ್ನು ಜೂನ್ ಮೊದಲ ವಾರದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015–16ನೇ ಸಾಲಿನ ಜೂನ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 9 ಪಿಎಸ್‌ಆರ್ 2015,ಬೆಂಗಳೂರು, ದಿನಾಂಕ : 04–06–2015.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಜೂನ್ 2015ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ. 46.00 ಕೋಟಿ (ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 02 ಟಿಎಫ್‌ಪಿ 2015 ಬೆಂಗಳೂರು ದಿನಾಂಕ : 09–04–2015ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 447

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2015–16ರ ಹಣಕಾಸು ವರ್ಷದ ಮೊದಲನೇ ತ್ರೈಮಾಸಿಕಕ್ಕೆ ಸಹಾಯಾನುದಾನದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಕವಿನಿ ಆಯೋಗದ ಪತ್ರ ಸಂಖ್ಯೆ ನಂ ಎಫ್/15/ಎಪಿ/ಕೆಇಆರ್‌ಸಿ/196 ದಿನಾಂಕ: 07–05–2015

**ಪ್ರಸ್ತಾವನೆ :**

1. 2015–16ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಒದಗಿಸುವ ಸಲುವಾಗಿ ರೂ.312.00 ಲಕ್ಷಗಳ ಅನುದಾನವನ್ನು ನಿಗಧಿಪಡಿಸಲಾಗಿದೆ. ಈ ಸಹಾಯಾನುದಾನವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015 ದಿನಾಂಕ: 09–04–2015ರಲ್ಲಿ ಆಡಳಿತ ಇಲಾಖೆಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ 2015–16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲ ಮೂರು ತಿಂಗಳ ಅವಧಿಗೆ ಸಹಾಯಾನುದಾನ ರೂ.78.00 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದವರು ಕೋರಿರುತ್ತಾರೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 8 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 16–06–2015**

1. ಸರ್ಕಾರವು, 2015–16ನೇ ಹಣಕಾಸು ವರ್ಷದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ ಲೆಕ್ಕ ಶೀರ್ಷಿಕೆ **"2801–80–101–1–07–101 ಸಹಾಯಾನುದಾನ (ಯೋಜನೇತರ)"** ಯಡಿ ಒದಗಿಸಿರುವ ಅನುದಾನದಲ್ಲಿ ಮೊದಲ ಕಂತಿನ ರೂ.78.00 ಲಕ್ಷಗಳನ್ನು (ಎಪ್ಪತ್ತೆಂಟು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015 ದಿನಾಂಕ: 09–04–2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

P.R. 448

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಮರಿಯಮ್ಮನಹಳ್ಳಿ ಹೋಬಳಿ, ಬಸವನದುರ್ಗ ಗ್ರಾಮ ಸ.ನಂ.138ರ ವಿಸ್ತೀರ್ಣ 24.29 ಹೆಕ್ಟೇರ್ (60.00 ಎಕರೆ) ಸಿ ಮತ್ತು ಡಿ ವರ್ಗದ ಜಮೀನನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು ಮೆ: ಎಂ. ಹನುಮಂತರಾವ್ ಇವರ ಪರವಾಗಿ ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂ.ಭೂಮಿ/ಸಿ&ಡಿ/59/2014–15, ದಿನಾಂಕ: 30–03–2015 ಮತ್ತು 30–04–2015

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ಮೆ: ಎಂ. ಹನುಮಂತರಾವ್, ಪಟೇಲ್‌ನಗರ, ಬಳ್ಳಾರಿ ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಎಲ್.45.ಎಂ.ಎಂ.ಎಂ/2005 ದಿನಾಂಕ: 09–3–2015ರಲ್ಲಿ ಗಣಿಗುತ್ತಿಗೆ ಮಂಜೂರಾಗಿದ್ದು, ಸದರಿ ಜಮೀನು ಅರಣ್ಯ ಜಮೀನಾಗಿರುವುದರಿಂದ ಅರಣ್ಯ ಜಮೀನಿಗೆ ಸಮಾನಾಂತರವಾಗಿ ಪರಿಹಾರಾತ್ಮಕವಾಗಿ ನೆಡುತೋಪು ಬೆಳೆಸಲು ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು,

ಮರಿಯಮ್ಮನಹಳ್ಳಿ ಹೋಬಳಿ, ಬಸವನದುರ್ಗ ಗ್ರಾಮ ಸ.ನಂ.138 ವಿಸ್ತೀರ್ಣ 24.29 ಹೆಕ್ಟೇರ್ (60.00 ಎಕರೆ) ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ವರದಿಯಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಪ್ರಸ್ತಾಪಿಸಲಾದ ಜಮೀನಿನಲ್ಲಿ ಬೆಲೆಬಾಳುವ ಗಿಡಮರಗಳು ಇರುವುದಿಲ್ಲವೆಂದೂ, ನಮೂನೆ 50 ಮತ್ತು 53ರ ಅರ್ಜಿ ಬಾಕಿ ಇರುವುದಿಲ್ಲವೆಂದು ಹಾಗೂ ಯಾವುದೇ ಪುರಾತನ ಸ್ಮಾರಕ ಕಟ್ಟಡಗಳು ಇರುವುದಿಲ್ಲವೆಂದೂ ತಿಳಿಸುತ್ತಾ ಜಮೀನನ್ನು ಲ್ಯಾಂಡ್ ಬ್ಯಾಂಕ್‌ನಲ್ಲಿ ಕಾಯ್ದಿರಿಸಲಾಗಿರುವುದರಿಂದ ಮೆ: ಎಂ. ಹನುಮಂತರಾವ್, ಪಟೇಲ್ ನಗರ, ಬಳ್ಳಾರಿ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 25 ಎಲ್‌ಜಿಇ 2015, ಬೆಂಗಳೂರು, ದಿನಾಂಕ : 14–07–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಮರಿಯಮ್ಮನಹಳ್ಳಿ ಹೋಬಳಿ, ಬಸವನದುರ್ಗ ಗ್ರಾಮದ ಸ.ನಂ. 138ರಲ್ಲಿ ವಿಸ್ತೀರ್ಣ 24.29 ಹೆಕ್ಟೇರ್ (60.00 ಎಕರೆ) ಸಿ ಮತ್ತು ಡಿ ವರ್ಗದ ಜಮೀನನ್ನು ಲ್ಯಾಂಡ್‌ಬ್ಯಾಂಕ್‌ನಿಂದ ಹಿಂಪಡೆದು ಮೆ: ಎಂ. ಹನುಮಂತರಾವ್, ಪಟೇಲ್ ನಗರ, ಬಳ್ಳಾರಿ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅರಣ್ಯ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

**ಷರತ್ತುಗಳು:**

1) ವರ್ಗಾವಣೆಯಾದ ಜಮೀನನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ.27.ಎಲ್‌ಜಿಪಿ.2011 ದಿನಾಂಕ: 06–04–2011ರ ಕಂಡಿಕೆ–6ರಂತೆ ಕ್ರಮವಹಿಸುವುದು.
2) ವರ್ಗಾವಣೆ ಪಡೆದ ಇಲಾಖೆಗೆ ವರ್ಗಾಯಿಸಿದ ಜಮೀನಿನ ಅವಶ್ಯಕತೆ ಇಲ್ಲದೇ ಇದ್ದಲ್ಲಿ ಮರಳಿ ಕಂದಾಯ ಇಲಾಖೆಗೆ ವಾಪಸ್ಸು ಮಾಡತಕ್ಕದ್ದು.
3) ವರ್ಗಾವಣೆಯಾದ ಜಮೀನನ್ನು ಅರಣ್ಯ ಇಲಾಖೆಯು ನೆಡುತೋಪು ಬೆಳೆಸುವ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು.
4) ಪ್ರಸ್ತಾಪಿತ ಜಮೀನಿನಲ್ಲಿ ಜಾನುವಾರುಗಳು ಮೇಯುವಿಕೆಗೆ ಅವಕಾಶ ನೀಡತಕ್ಕದ್ದು.

**P.R. 450**

**SC: 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಹಾಂತೇಗೌಡ ಎಸ್.ಎಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಕಮಲಾಪುರ ಗ್ರಾಮದ ಸ.ನಂ. 1200/3ರಲ್ಲಿ ವಿಸ್ತೀರ್ಣ 17.40 ಹೆಕ್ಟೇರ್ (43.00 ಎಕರೆ) ಸಿ ಮತ್ತು ಡಿ ವರ್ಗದ ಜಮೀನನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು ಮೆ: ಎಂ. ಹನುಮಂತರಾವ್ ಇವರ ಪರವಾಗಿ ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂ.ಭೂಮಿ/ಸಿ&ಡಿ/252/2013–14 ದಿನಾಂಕ: 30–03–2015 ಮತ್ತು 30–04–2015

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ಮೆ: ಎಂ. ಹನುಮಂತರಾವ್, ಪಟೇಲ್‌ನಗರ, ಬಳ್ಳಾರಿ ಇವರಿಗೆ ಸರ್ಕಾರದ ಆದೇಶ ಸಂಖ್ಯೆ ಸಿಎಲ್.45.ಎಂ.ಎಂ.ಎಂ./2005 ದಿನಾಂಕ: 09–03–2015ರಲ್ಲಿ ಗಣಿಗುತ್ತಿಗೆ ಮಂಜೂರಾಗಿದ್ದು, ಸದರಿ ಜಮೀನು ಅರಣ್ಯ ಜಮೀನಾಗಿರುವುದರಿಂದ ಅರಣ್ಯ ಜಮೀನಿಗೆ ಸಮಾನಾಂತರವಾಗಿ ಪರಿಹಾರಾತ್ಮಕವಾಗಿ ನೆಡುತೋಪು ಬೆಳೆಸಲು ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಕಮಲಾಪುರ ಗ್ರಾಮದ ಸ.ನಂ.1200/3ರ ವಿಸ್ತೀರ್ಣ 17.40 ಹೆಕ್ಟೇರ್ (43.00 ಎಕರೆ) ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ವರದಿಯಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಪ್ರಸ್ತಾಪಿಸಲಾದ ಜಮೀನಿನಲ್ಲಿ ಬೆಲೆಬಾಳುವ ಗಿಡಮರಗಳು ಇರುವುದಿಲ್ಲವೆಂದೂ, ನಮೂನೆ 50 ಮತ್ತು 53ರ ಅರ್ಜಿ ಬಾಕಿ ಇರುವುದಿಲ್ಲವೆಂದೂ ಹಾಗೂ ಯಾವುದೇ ಪುರಾತನ ಸ್ಮಾರಕ ಕಟ್ಟಡಗಳು ಇರುವುದಿಲ್ಲವೆಂದೂ ತಿಳಿಸುತ್ತಾ ಜಮೀನನ್ನು ಲ್ಯಾಂಡ್ ಬ್ಯಾಂಕ್‌ನಲ್ಲಿ ಕಾಯ್ದಿರಿಸಲಾಗಿರುವುದರಿಂದ ಮೆ: ಎಂ. ಹನುಮಂತರಾವ್, ಪಟೇಲ್ ನಗರ, ಬಳ್ಳಾರಿ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 26 ಎಲ್‌ಜಿಇ 2015, ಬೆಂಗಳೂರು, ದಿನಾಂಕ : 14–07–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಕಮಲಾಪುರ ಗ್ರಾಮದ ಸ.ನಂ.1200/3ರ ವಿಸ್ತೀರ್ಣ 17.40 ಹೆಕ್ಟೇರ್ (43.00 ಎಕರೆ) ಸಿ ಮತ್ತು ಡಿ ವರ್ಗದ ಜಮೀನನ್ನು ಲ್ಯಾಂಡ್‌ಬ್ಯಾಂಕ್‌ನಿಂದ ಹಿಂಪಡೆದು ಮೆ: ಎಂ. ಹನುಮಂತರಾವ್, ಪಟೇಲ್ ನಗರ. ಬಳ್ಳಾರಿ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅರಣ್ಯ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

**ಷರತ್ತುಗಳು:**

1) ವರ್ಗಾವಣೆಯಾದ ಜಮೀನನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ.27.ಎಲ್‌ಜಿಪಿ.2011 ದಿನಾಂಕ: 06–04–2011ರ ಕಂಡಿಕೆ–6ರಂತೆ ಕ್ರಮವಹಿಸುವುದು.
2) ವರ್ಗಾವಣೆ ಪಡೆದ ಇಲಾಖೆಗೆ ವರ್ಗಾಯಿಸಿದ ಜಮೀನಿನ ಅವಶ್ಯಕತೆ ಇಲ್ಲದೇ ಇದ್ದಲ್ಲಿ ಮರಳಿ ಕಂದಾಯ ಇಲಾಖೆಗೆ ವಾಪಸ್ಸು ಮಾಡತಕ್ಕದ್ದು.
3) ವರ್ಗಾವಣೆಯಾದ ಜಮೀನನ್ನು ಅರಣ್ಯ ಇಲಾಖೆಯು ನೆಡುತೋಪು ಬೆಳೆಸುವ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು.
4) ಪ್ರಸ್ತಾಪಿತ ಜಮೀನಿನಲ್ಲಿ ಜಾನುವಾರುಗಳು ಮೇಯುವಿಕೆಗೆ ಅವಕಾಶ ನೀಡತಕ್ಕದ್ದು.

**P.R. 451**

**SC : 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕೇಂದ್ರ ಕಛೇರಿಯ ಸಮರ್ಪಕ ನಿರ್ವಹಣೆಗೆ ಅಗತ್ಯ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:–**

1. ಸರ್ಕಾರದ ಆದೇಶ ಸಂಖ್ಯೆ: ಸಕಇ 532 ಎಸ್‌ಇಡಬ್ಲ್ಯೂ 96, ಬೆಂಗಳೂರು ದಿನಾಂಕ: 06–10–1999
2. ಸರ್ಕಾರದ ಆದೇಶ ಸಂಖ್ಯೆ:ಸಕಇ 109 ಮೊದೇಶಾ 2009, ಬೆಂಗಳೂರು ದಿನಾಂಕ:14–07–2010
3. ಸರ್ಕಾರದ ಆದೇಶ ಸಂಖ್ಯೆ:ಸಕಇ 89 ಮೊದೇಶಾ 2011, ಬೆಂಗಳೂರು, ದಿನಾಂಕ: 07–09–2011
4. ಸರ್ಕಾರದ ಆದೇಶ ಸಂಖ್ಯೆ: ಸಕಇ 120 ಮೊದೇಶಾ 2011, ಬೆಂಗಳೂರು ದಿನಾಂಕ:23–06–2012
5. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ : ಕವಶಿಸಸ/ಆಡಳಿತ(1) ಸಿಆರ್–229/ 2013–14, ದಿ: 22–03–2014 ಹಾಗೂ ದಿ:15.05.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ವಹಣೆ ಮತ್ತು ಕಟ್ಟಡಗಳ ನಿರ್ಮಾಣ ಮಾಡಲು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ಸ್ಥಾಪಿಸಿ, ಸಂಘದ ಕೇಂದ್ರ ಕಛೇರಿಗೆ 14 ಆಡಳಿತಾತ್ಮಕ ಹುದ್ದೆಗಳನ್ನು ಮಂಜೂರು ಮಾಡಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕೇಂದ್ರ ಕಛೇರಿಯಲ್ಲಿ ಒಂದು ಶಾಶ್ವತ ಇಂಜಿನೀಯರಿಂಗ್ ವಿಭಾಗವನ್ನು ಸ್ಥಾಪಿಸಿ, 12 ತಾಂತ್ರಿಕ ಹುದ್ದೆಗಳನ್ನು ಮಂಜೂರು ಮಾಡಿ, ಭರ್ತಿ ಮಾಡಿಕೊಳ್ಳಲು ಅನುಮೋದನೆ ನೀಡಿ, ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕೇಂದ್ರ ಕಛೇರಿಯಲ್ಲಿ ಒಂದು ಶಾಶ್ವತ ಇಂಜಿನೀಯರಿಂಗ್ ವಿಭಾಗದ 12 ತಾಂತ್ರಿಕ ಹುದ್ದೆಗಳನ್ನು ದಿನಾಂಕ:13.7.2011 ರಿಂದ 31.7.2012 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಇಂಜಿನೀಯರ್ ವಿಭಾಗಕ್ಕೆ ವಿವಿಧ ವೃಂದದ 32 ಹೆಚ್ಚುವರಿ ತಾಂತ್ರಿಕ ಹುದ್ದೆಗಳನ್ನು ಮಂಜೂರು ಮಾಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯಲ್ಲಿ ಒಟ್ಟು 505 ಮೊರಾರ್ಜಿ ದೇಸಾಯಿ/ಕಿತ್ತೂರು ರಾಣಿ ಚೆನ್ನಮ್ಮ/ಏಕಲವ್ಯ /ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆಗಳು ಹಾಗೂ ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಸಂಘದ ಕೇಂದ್ರ ಕಛೇರಿಯಲ್ಲಿ 14 ಆಡಳಿತಾತ್ಮಕ ಹಾಗೂ 44 ತಾಂತ್ರಿಕ ಹುದ್ದೆಗಳನ್ನು ಮಂಜೂರು ಮಾಡಿದ್ದು, ವಿವಿಧ ಇಲಾಖೆಗಳಿಂದ ನಿಯೋಜನೆ ಮೇಲೆ ನೇಮಕ ಮಾಡಿಕೊಳ್ಳಲಾಗಿದೆ. ಆದರೆ, ಈ ವಸತಿ ಶಾಲೆಗಳ ಶೈಕ್ಷಣಿಕ, ಆಡಳಿತಾತ್ಮಕ ಮತ್ತು ವಸತಿ ಶಾಲೆಗಳ ನಿರ್ವಹಣೆ, ವಿದ್ಯಾರ್ಥಿಗಳಿಗೆ ಪಾಠ ಪ್ರವಚನ ಮತ್ತು ಪಠ್ಯೇತರ ಚಟುವಟಿಕೆಗಳ ಕಾರ್ಯಕ್ರಮ, ವಸತಿ ಶಾಲೆಗಳ ಸಿಬ್ಬಂದಿಗಳ ನಿರ್ವಹಣೆ ಮತ್ತು ಇತರೆ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು, ಸ್ಥಳೀಯ ಸಮಸ್ಯೆಗಳನ್ನು ಬಗೆಹರಿಸುವುದು ಹಾಗೂ ವಸತಿ ಶಾಲೆಗಳನ್ನು ಕಾಲಕಾಲಕ್ಕೆ ತಪಾಸಣೆ ಮಾಡಿ, ಮಾರ್ಗದರ್ಶನ ನೀಡಲು ಹಾಗೂ ವರದಿ ಮಂಡಿಸಲು ಹಿರಿಯ ಅಧಿಕಾರಿಗಳ ಮತ್ತು ಸಿಬ್ಬಂದಿಗಳ ಕೊರತೆ ಇರುವುದರಿಂದ ಸಂಘದ ಕೇಂದ್ರ ಕಛೇರಿಯನ್ನು ಬಲಪಡಿಸುವುದು ಅಗತ್ಯವಾಗಿದೆ ಹಾಗೂ ಜಿಲ್ಲಾ ಮಟ್ಟದಲ್ಲಿ ವಸತಿ ಶಾಲೆಗಳ ಹಾಗೂ ಸಿಬ್ಬಂದಿಗಳ ಸಮರ್ಪಕ ನಿರ್ವಹಣೆಗೆ, ಕಾಲಕಾಲಕ್ಕೆ ತಪಾಸಣೆ, ಶೈಕ್ಷಣಿಕ ಕಾರ್ಯಕ್ರಮಗಳ ಅನುಷ್ಠಾನ, ಸ್ಥಳೀಯ ಸಮಸ್ಯೆಗಳಿಗೆ ಪರಿಹಾರ, ವಿವಿಧ ಇಲಾಖೆಗಳೊಂದಿಗೆ ಸಮನ್ವಯ ಸಾಧನೆ, ಕೇಂದ್ರ

ಕಛೇರಿ ಮತ್ತು ಸರ್ಕಾರಕ್ಕೆ ವಸತಿ ಶಾಲೆಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಒದಗಿಸುವುದು, ಜಿಲ್ಲಾ ಮಟ್ಟದ ಸಭೆಗಳಿಗೆ ಹಾಜರಾಗುವುದು ಇತ್ಯಾದಿ ಕಾರ್ಯ ಒತ್ತಡವಿರುವುದರಿಂದ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕೇಂದ್ರ ಕಛೇರಿಗೆ 49 ಹೆಚ್ಚುವರಿ ಹುದ್ದೆಗಳನ್ನು ಹಾಗೂ ಎರಡು ಜಿಲ್ಲೆಗಳಿಗೆ ಒಂದರಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ 15 ಜಿಲ್ಲಾ ಮಟ್ಟದ ಕಛೇರಿಗಳನ್ನು ಪ್ರಾರಂಭಿಸಿ, 158 ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಲು ಕಾರ್ಯನಿರ್ವಾಹಕ ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 196 ಬಿಇಟಿ 2015 ಬೆಂಗಳೂರು ದಿನಾಂಕ:19-08-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕೇಂದ್ರ ಕಛೇರಿಗೆ ಆಡಳಿತಾತ್ಮಕ, ಲೆಕ್ಕಪತ್ರ/ಲೆಕ್ಕಪರಿಶೋಧನೆಗೆ ಸಂಬಂಧಿಸಿದ ಈ ಕೆಳಕಂಡಂತೆ 26 ಹುದ್ದೆಗಳನ್ನು ಸೃಜಿಸಲು ಅನುಮೋದನೆ ನೀಡಿ ಆದೇಶಿಸಿದೆ.

| ಕ್ರ. ಸಂ | ಪದನಾಮ | ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1 | ಜಂಟಿ ನಿರ್ದೇಶಕರು (ಹೆಚ್‌ಆರ್‌ಡಿ) | 1 | ಸಮಾಜ ಕಲ್ಯಾಣ/ಹಿಂದುಳಿದ ವರ್ಗಗಳ ಕಲ್ಯಾಣ/ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳಿಂದ ನಿಯೋಜನೆ ಮೇರೆಗೆ |
| 2 | ಜಂಟಿ ನಿರ್ದೇಶಕರು (ಶಿಕ್ಷಣ ಮತ್ತು ತರಬೇತಿ) | 1 | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇರೆಗೆ |
| 3 | ಉಪ ನಿರ್ದೇಶಕರು (ಹೆಚ್‌ಆರ್‌ಡಿ) | 1 | ಸಮಾಜ ಕಲ್ಯಾಣ/ಹಿಂದುಳಿದ ವರ್ಗಗಳ ಕಲ್ಯಾಣ/ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳಿಂದ ನಿಯೋಜನೆ ಮೇರೆಗೆ |
| 4 | ಉಪ ನಿರ್ದೇಶಕರು (ಶಿಕ್ಷಣ ಮತ್ತು ತರಬೇತಿ) | 1 | ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇರೆಗೆ |
| 5 | ಮುಖ್ಯ ಲೆಕ್ಕಾಧಿಕಾರಿ | 1 | ಕರ್ನಾಟಕ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ |
| 6 | ಲೆಕ್ಕ ಪರಿಶೋಧಕರು (ಆಡಿಟರ್ಸ್) | 2 | ಕರ್ನಾಟಕ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ |
| 7 | ಕಛೇರಿ ಮೇಲ್ವಿಚಾರಕರು | 3 | ಯಾವುದಾದರೂ ಇಲಾಖೆಯಿಂದ ನಿಯೋಜನೆ ಮೇರೆಗೆ |
| 8 | ಶೀಘ್ರಲಿಪಿಗಾರರು ಕಂ ಡಾಟಾ ಎಂಟ್ರಿ ಆಪರೇಟರ್ | 1 | ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳನ್ವಯ |
| 9 | ಗುಮಾಸ್ತರು ಕಮ್ ಬೆರಳಚ್ಚುಗಾರರು | 7 | ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳನ್ವಯ |
| 10 | ವಾಹನಚಾಲಕರು | 3 | ಹೊರಸಂಪನ್ಮೂಲ |
| 11 | ಗ್ರೂಪ್ ಡಿ | 5 | ಹೊರಸಂಪನ್ಮೂಲ |
| | **ಒಟ್ಟು** | **26** | |

ಇದಕ್ಕೆ ತಗಲುವ ವೆಚ್ಚವನ್ನು ಸಂಘದ ನಿರ್ವಹಣಾ ವೆಚ್ಚ ಲೆಕ್ಕಶೀರ್ಷಿಕೆ 2225-01-277-0-53 ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 552 ವೆಚ್ಚ-3/2015, ದಿನಾಂಕ:17-08-2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ-1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**P.R. 520**

**S.C. 300**

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಭದ್ರತಾ ಮುದ್ರಣಾಲಯ, ಪೀಣ್ಯ ಬೆಂಗಳೂರು ಇಲ್ಲಿ ಎರಡನೇ ಪಾಳಿ ಆರಂಭಿಸುವ ಬಗ್ಗೆ.

**ಓದಲಾಗಿದೆ :**

1) ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ರವರ ಪತ್ರ ಸಂಖ್ಯೆ: ಡಿಪಿಎಸ್/ಪಿಎಲ್‌ಜಿ/20/2013-14/161 ದಿನಾಂಕ: 09/12/2013.

2) ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ರವರ ಪತ್ರ ಸಂಖ್ಯೆ: ಡಿಪಿಎಸ್/ಪಿಎಲ್‌ಜಿ/205/2013-14 ದಿನಾಂಕ: 11/02/2014.

3) ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ರವರ ಪತ್ರ ಸಂಖ್ಯೆ: ಡಿಪಿಎಸ್/ಪಿಎಲ್‌ಜಿ/20/84/2014-15 ದಿನಾಂಕ: 08/09-07/2014.

**ಪ್ರಸ್ತಾವನೆ :**

ಮೇಲೆ 1 ರಿಂದ 3ರಲ್ಲಿ ಓದಲಾದ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಬೆಂಗಳೂರು, ಇವರ ಪತ್ರಗಳಲ್ಲಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಗೌಪ್ಯ ಹಾಗೂ ಭದ್ರತಾ ಕೆಲಸಗಳ ನಿರ್ವಹಣೆಗೆ ಒಂದು ಸುಸಜ್ಜಿತ ಮುದ್ರಣಾಲಯವನ್ನು 2012ರಲ್ಲಿ ಪ್ರಾರಂಭಿಸಲಾಗಿದ್ದು, ಈ ಮುದ್ರಣಾಲಯವು ಸದ್ಯಕ್ಕೆ ಒಂದು ಪಾಳಿಯಲ್ಲಿ ಮಾತ್ರ ಕೆಲಸ ನಿರ್ವಹಿಸುತ್ತಿದ್ದು, ಮುದ್ರಣಾಲಯದಲ್ಲಿ ಉತ್ತರ ಪತ್ರಿಕೆಗಳು, ರಶೀದಿ ಪುಸ್ತಕಗಳು, ವಿವಿಧ ಇಲಾಖೆಗಳಿಗೆ ಆದಾಯ ತರುವಂತಹ ನಮೂನೆಗಳು, Continuous Computer Stationery, Invoice ಪುಸ್ತಕಗಳ ಮುದ್ರಣ ಮತ್ತಿತರ ಅನೇಕ ರೀತಿಯ ಭದ್ರತಾ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ. ಮುಖ್ಯವಾಗಿ ಸಾರಿಗೆ ಇಲಾಖೆಗೆ ಸಂಬಂಧಿಸಿದ ಗಣಕೀಕೃತ ಕಲಿಕಾ ಚಾಲನಾ ಅನುಜ್ಞಾ ಪತ್ರಗಳು, ತೆರಿಗೆ ಮತ್ತು ಶುಲ್ಕ ಚಲನ್‌ಗಳು ಮುಂತಾದವುಗಳ ತೀವ್ರ ಕೆಲಸದ ಒತ್ತಡವಿರುತ್ತದೆ. ಹೀಗಾಗಿ ಸದರಿ ಕೆಲಸಗಳನ್ನು ಖಾಸಗಿ ಸಂಸ್ಥೆಗಳ ಮುಖೇನ ನಿರ್ವಹಿಸಬೇಕಾದ ಅನಿವಾರ್ಯ ಪರಿಸ್ಥಿತಿಯು ಉಂಟಾಗುತ್ತಿದೆ.

ಈ ಮುದ್ರಣಾಲಯದಲ್ಲಿ ಸುಮಾರು ರೂ. 2.00 ಕೋಟಿ ಮೌಲ್ಯದ ಯಂತ್ರೋಪಕರಣಗಳಿದ್ದು, ಇದು ಒಂದು ಸುಸಜ್ಜಿತ ಕಟ್ಟಡವಾಗಿರುತ್ತದೆ. ಈ ಮುದ್ರಣಾಲಯದ ಮೇಲೆ ಹೂಡಲಾಗಿರುವ ಬಂಡವಾಳದ ಮೇಲೆ ಹೆಚ್ಚಿನ ಫಲಶೃತಿಯನ್ನು ಪಡೆಯಬೇಕಾದಲ್ಲಿ ಹಾಗೂ ಇರುವ ಬೇಡಿಕೆಯನ್ನು ಸರಿದೂಗಿಸಬೇಕಾದಲ್ಲಿ ಈ ಮುದ್ರಣಾಲಯವನ್ನು ಎರಡು ಪಾಳಿಯಲ್ಲಿ ನಿರ್ವಹಿಸಬೇಕಾದ ಅವಶ್ಯಕತೆ ಇರುತ್ತದೆ. ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 09/12/2013ರ ಪತ್ರದಲ್ಲಿ ಈ ಕೆಳಗಿನಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

- ಸರ್ಕಾರಿ ಭದ್ರತಾ ಮುದ್ರಣಾಲಯ, ಪೀಣ್ಯ ಇಲ್ಲಿ 2ನೇ ಪಾಳಿಯನ್ನು ಪ್ರಾರಂಭಿಸುವುದು. (1ನೇ ಪಾಳಿ ಬೆಳಿಗ್ಗೆ 6.30 ರಿಂದ ಮಧ್ಯಾಹ್ನ 2.00ವರೆಗೆ, 2ನೇ ಪಾಳಿ ಮಧ್ಯಾಹ್ನ 2.00 ಗಂಟೆಯಿಂದ ರಾತ್ರಿ 9.30ರ ವರೆಗೆ)
- ವಿವಿಧ ವೃಂದದ 75 ಹುದ್ದೆಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡುವುದು ಹಾಗೂ ಮಂಜೂರಾಗಿರುವ 17 ಹುದ್ದೆಗಳನ್ನು ರದ್ದು ಮಾಡುವುದು.
- ಹೆಚ್ಚುವರಿಯಾಗಿ ಬೇಕಾಗುವ ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳಲು ಅನುಮತಿ ಹಾಗೂ ಖಾಯಂ ನೇಮಕಾತಿ ಆಗುವವರೆಗೆ ಸದರಿ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವುದು.
- ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳುವ ಸಿಬ್ಬಂದಿಗೆ ಆಗಿಂದಾಗ್ಗೆ ಕಾರ್ಮಿಕ ಇಲಾಖೆಯವರು ನಿಗಧಿಪಡಿಸಿರುವ ಕನಿಷ್ಠ ವೇತನವನ್ನು ಇಲಾಖೆ ವತಿಯಿಂದ ಖಜಾನೆಯಿಂದ ತೆಗೆದು ಪಾವತಿಸುವ ಬಗ್ಗೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 02 ಇಎಸ್‌ಡಬ್ಲ್ಯೂ 2014, ಬೆಂಗಳೂರು ದಿನಾಂಕ: 07/08/2015ಕ್ಕೆ**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಸರ್ಕಾರಿ ಭದ್ರತಾ ಮುದ್ರಣಾಲಯ, ಪೀಣ್ಯ ಬೆಂಗಳೂರು ಇಲ್ಲಿ 2ನೇ ಪಾಳಿ ಪ್ರಾರಂಭಿಸಲು ಈ ಆದೇಶದೊಂದಿಗೆ ಲಗತ್ತಿಸಿದ ಅನುಬಂಧದಲ್ಲಿ ತಿಳಿಸಿರುವ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ, (ವೆಚ್ಚ–7&8) ದಿನಾಂಕ: 02/07/2015ರ ಅನಧಿಕೃತ ಟಿಪ್ಪಣಿ ಸಂಖ್ಯೆ: FD 858 Exp-8/2014 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ತಾರಾ**
ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 02 ಇಎಸ್‌ಡಬ್ಲ್ಯೂ 2014, ಬೆಂಗಳೂರು ದಿನಾಂಕ: 07/08/2015ಕ್ಕೆ**

**ಅನುಬಂಧ**

**On Permanent Recruitment Basis :**

| Sl. No. | Designation | No. of Posts | Recruitment Method |
|---|---|---|---|
| 1. | Supervisor | 01 | Regular Basis |
| 2. | Agra Karmikaru | 01 | |
| 3. | SDA | 01 | |
| 4. | Time Keeper | 01 (for Security reasons | |
| | **Total** | **04** | |

**Out Sourcing Basis :**

| Sl. No. | Designation | No. of Posts | Recruitment Method |
|---|---|---|---|
| 1. | Typist | 01 | By Outsourcing |
| 2. | Jawan/Attender/Cleaning Staff | 03 | |
| 3. | Artist | 01 | |
| 4. | Offset Printer | 07 | |
| 5. | Assistant Offset Printer | 14 | |
| 6. | Senior Binder | 07 | |
| 7. | Binder | 03 | |
| 8. | Assistant Binder | 03 | |
| 9. | Senior Packer | 01 | |
| | **Total** | **40** | |

**ತಾರಾ**
ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

**PR-504**

**SC-50**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 24, 25 ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಅಗರ ಗ್ರಾಮ ಸ.ನಂ. 28ರಲ್ಲಿ ಒಟ್ಟು 29.07 ಎಕರೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ವಾಸವಾಗಿರುವ ಬಡ ನಿವೇಶನ ರಹಿತ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಮಾನ್ಯ ಕಂದಾಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ದಿನಾಂಕ: 18–07–2014.
2. ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ (ಎನ್) ಸಿಆರ್/142/13–14 ದಿನಾಂಕ: 10–10–2014 ಹಾಗೂ 03–11–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 18–07–2014 ರಂದು ಮಾನ್ಯ ಕಂದಾಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಿವೇಶನರಹಿತ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಬಡ ಜನರು ಅನೇಕ ವರ್ಷಗಳಿಂದ ನಿವೇಶನವನ್ನು ಕೋರಿ ಆಗ್ರಹಿಸುತ್ತಾ ಬಂದಿದ್ದು, ಈವರೆಗೂ ನಿವೇಶನ ದೊರೆತಿರುವುದಿಲ್ಲ. ಇವರಿಗೆ ನಿವೇಶನ ಕಲ್ಪಿಸಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು 2009ರಲ್ಲಿಯೇ ಯೋಜನೆ ರೂಪಿಸಿದ್ದು, ಜಮೀನಿನ ಅಲಭ್ಯತೆಯಿಂದ ಈ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ. ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸ.ನಂ. 75/ಪಿ1ರಲ್ಲಿ 25.00 ಎಕರೆ ಜಮೀನನ್ನು ಬಿ.ಬಿಎಂ.ಪಿ ವ್ಯಾಪ್ತಿಯಲ್ಲಿ ವಾಸವಿರುವ ನಿವೇಶನ ರಹಿತ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ನಿವೇಶನ ಮಂಜೂರು ಮಾಡಲು ಕೋರಿದ್ದು, ಆದರೆ ಪ್ರಸ್ತಾಪಿತ 25–00 ಎಕರೆ ಜಮೀನನ್ನು ತ್ಯಾಜ್ಯ ವಿಲೇವಾರಿಗಾಗಿ ಮೀಸಲಿರಿಸಿ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಅಫಿಡವಿಟ್ ಸಲ್ಲಿಸಿದ ಹಿನ್ನೆಲೆಯಲ್ಲಿ ನಿವೇಶನ ರಹಿತ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ನಿವೇಶನ ಕಲ್ಪಿಸಲು ಬದಲಿ ಜಮೀನು ಗುರುತಿಸಲು ತೀರ್ಮಾನಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ವಾಸವಾಗಿರುವ ಬಡ ನಿವೇಶನ ರಹಿತ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನಿವೇಶನಗಳನ್ನು ಮಂಜೂರು ಮಾಡಲು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸರ್ಕಾರಿ ಗೋಮಾಳದ ಸ.ನಂ.24 ರಲ್ಲಿ 18.23 ಎಕರೆ,ಸರ್ವೆ ನಂ. 25ರ ಸರ್ಕಾರಿ ಗೋಮಾಳದಲ್ಲಿ 3–09 ಎಕರೆ/ಗುಂಟೆ ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಅಗರ ಗ್ರಾಮ ಸ.ನಂ. 28ರಲ್ಲಿ 7.05 ಎಕರೆ ಒಟ್ಟು 29.07 ಎಕರೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 375 ಎಲ್‌ಜಿಬಿ 2014, ಬೆಂಗಳೂರು ದಿನಾಂಕ: 27–03–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 108–ಐ ರಲ್ಲಿನ ನಿಬಂಧನೆಯನ್ನು ಸಡಿಲಿಸಿ, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ.24

ರಲ್ಲಿ 18.33 ಎಕರೆ, ಸರ್ವೆ ನಂ. 25 ರಲ್ಲಿ 3–09 ಎಕರೆ/ಗುಂಟೆ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಅಗರ ಗ್ರಾಮ ಸ.ನಂ. 28ರಲ್ಲಿ 7.05 ಎಕರೆ **ಒಟ್ಟು 29.07** ಎಕರೆ ಜಮೀನನ್ನು ಬಡ ನಿವೇಶನ ರಹಿತ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಸರ್ಕಾರದ ಮಾರ್ಗಸೂಚಿಗಳನ್ನು ಅನುಸರಿಸಿ ನಿವೇಶನ ನೀಡಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರಿಗೆ ಉಚಿತವಾಗಿ ಈ ಕೆಳಕಂಡ ಷರತ್ತು/ನಿಬಂಧನೆಗಳಿಗೊಳಪಟ್ಟು ಮಂಜೂರು ಮಾಡಿ ಹಸ್ತಾಂತರಿಸಲು ಆದೇಶಿಸಿದೆ.

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
6. ಮಂಜೂರಾದ ಜಮೀನು ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
7. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
8. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
9. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ/ಇಲಾಖೆಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಸ್ಕೆಚ್‌ನಂತೆ ಸರ್ವೆ ಮಾಡಿ ಹಸ್ತಾಂತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–1)

**PR. 532**

**SC. 50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 131 ಸೇಅನೇ 2015, ಬೆಂಗಳೂರು, ದಿನಾಂಕ: 27.08.2015**

**ವಿಷಯ:** ಅನುಕಂಪದ ಆಧಾರದ ಮೇಲೆ ನೇಮಕಾತಿ ಕುರಿತು ಸ್ಪಷ್ಟೀಕರಣ.

ಕರ್ನಾಟಕ ಸಿವಿಲ್ ಸೇವಾ (ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು, 1996 ರನ್ವಯ ಸರ್ಕಾರಿ ನೌಕರರು ಸೇವೆಯಲ್ಲಿರುವಾಗಲೇ ಮೃತಪಟ್ಟಲ್ಲಿ ಅವರ ಅವಲಂಬಿತರಲ್ಲಿ ಅರ್ಹರಾದ ಒಬ್ಬರಿಗೆ, ನಿಯಮಗಳಲ್ಲಿ ನಿಗದಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಅನುಕಂಪದ ಆಧಾರದ ನೇಮಕಾತಿಯನ್ನು ನೀಡಬಹುದಾಗಿದೆ. ಈ ನಿಯಮಗಳ ನಿಯಮ 3 ರಲ್ಲಿ ಈ ಅನುಕಂಪದ ಆಧಾರದ ನೇಮಕಾತಿಗೆ ಅರ್ಹತೆಯನ್ನು ಹಾಗೂ ನಿಯಮ 2 ರಲ್ಲಿ **'ಕುಟುಂಬ'** ಪದದ ಅರ್ಥವನ್ನು ವ್ಯಾಖ್ಯಾನಿಸಲಾಗಿದೆ. ನಿಯಮ 3 ರನ್ವಯ ಅನುಕಂಪದ ಆಧಾರದ ನೇಮಕಾತಿಯನ್ನು ಸಂದರ್ಭಾನುಸಾರ ಪತ್ನಿ ಅಥವಾ ಪತಿ, ಮಗ, ಅವಿವಾಹಿತ ಮಗಳು ಹಾಗೂ ವಿಧವಾ ಮಗಳು ಪಡೆಯಬಹುದಾಗಿರುತ್ತದೆ. ಸರ್ಕಾರಿ ನೌಕರನ ಕಾನೂನುಬಾಹಿರ ಎರಡನೇ ಪತ್ನಿಯಿಂದ ಜನಿಸಿದ ಮಕ್ಕಳಿಗೆ ಅನುಕಂಪದ ಆಧಾರದ ನೇಮಕಾತಿ ನೀಡುವ ಬಗ್ಗೆ ವಿವಿಧ ಇಲಾಖೆಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಸೇವಾ ನಿಯಮಗಳು)ದ ಅಭಿಪ್ರಾಯ ಕೋರುತ್ತಿವೆ. ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಮೇಲ್ಮನವಿ ಸಂಖ್ಯೆ: 442/2010 ರಲ್ಲಿ ದಿನಾಂಕ: 29.08.2013 ರಂದು ಕೆಳಕಂಡಂತೆ ತೀರ್ಪು ನೀಡಿರುತ್ತದೆ.

"The wife and children of a deceased employee refer to legally wedded wife i.e., the first wife and her children. If the employee takes a second wife during the lifetime of the first wife, the children through such second wife cannot be considered as dependent members of the family for the purpose of considering them for appointment on compassionate grounds. The second marriage when spouse is living, was held to be void under Section 5(1) of the Hindu Marriage Act, 1955. The legitimacy of the children of void marriages as provided for under Section 16 of the Hindu Marriage Act, is only for the purpose of claiming the right in or to the property of the parties and not for claiming any rights against third parties. Therefore, it is clear, the son of the Second wife is not entitled to claim compassionate appointment. Otherwise, if such claims are upheld by the employers and by these Courts, it would have the effect of encouraging second marriages and passing orders by the Courts ignoring the statutory provisions which are enacted by the Parliament, with the intention of preventing this malady of second marriage which is prevalent in the society."

ಈ ತೀರ್ಪಿನನ್ವಯ ಸರ್ಕಾರಿ ನೌಕರನು ತನ್ನ ಸೇವಾವಧಿಯಲ್ಲಿ ಹಾಗೂ ಮೊದಲನೇ ಪತ್ನಿ ಜೀವಂತವಿರುವಾಗಲೇ ಎರಡನೇ ಮದುವೆಯಾಗುವುದು ಕಾನೂನುಬಾಹಿರವಾಗಿರುತ್ತದೆ. ಮೃತ ಸರ್ಕಾರಿ ನೌಕರನಿಗೆ ಕಾನೂನುಬಾಹಿರವಾಗಿ ಮದುವೆಯಾದ ಎರಡನೇ ಪತ್ನಿಯಿಂದ ಜನಿಸಿದ ಮಕ್ಕಳು ಕಾನೂನು ಮಾನ್ಯತೆ ಪಡೆಯುವವರಾದರೂ(Legitimacy) ಕುಟುಂಬ ಸದಸ್ಯರ ವ್ಯಾಖ್ಯಾನದ ಪರಿಧಿಯೊಳಗೆ ಇವರು ಬಾರದೇ ಇರುವುದರಿಂದ ಎರಡನೇ ಪತ್ನಿಗೆ ಜನಿಸಿದ ಮಕ್ಕಳು ಅನುಕಂಪದ ಆಧಾರದ ನೇಮಕಾತಿಗೆ ಅರ್ಹರಾಗುವುದಿಲ್ಲ.

ಅನುಕಂಪದ ಆಧಾರದ ನೇಮಕಾತಿಯನ್ನು ಮಾಡುವ ಎಲ್ಲಾ ಸಕ್ಷಮ ಪ್ರಾಧಿಕಾರಗಳು ಈ ಅಂಶವನ್ನು ಗಮನದಲ್ಲಿಟ್ಟುಕೊಳ್ಳುವಂತೆ ಸೂಚಿಸಲಾಗಿದೆ.

**ಡಾ. ಮಂಗಳ. ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1).

**PR. 528**

**SC.200**

## ಆರ್ಥಿಕ ಸಚಿವಾಲಯ

**ವಿಷಯ :** "ಹೊಸಸೇವಾ" ವೆಚ್ಚದ ವ್ಯಾಪ್ತಿ-ಮಾನದಂಡಗಳ ಪರಿಷ್ಕರಣೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಆಇ 10 ಬಿಯುಡಿ 1984 ದಿನಾಂಕ : 16-10-1987,
2. ಅ.ಸ.ಪ. ಸಂಖ್ಯೆ : ಆಇ 05 ಬಿಪಿಎ 1999, ದಿನಾಂಕ : 14-09-2010.
3. ಹೊಸ ಸೇವೆಗಳು/ಹೊಸ ಸೇವಾ ಸಾಧನಗಳಿಗಾಗಿ ಪರಿಷ್ಕೃತ ಮಾನದಂಡಗಳ ಮೇಲೆ ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿಯು ಶಿಫಾರಸ್ಸು ಮಾಡಿರುವ ದಿನಾಂಕ : 18-12-2014 ರಂದು ವಿಧಾನ ಸಭೆಗೆ ಸಲ್ಲಿಸಿರುವ (14ನೇ ವಿಧಾನ ಸಭೆ) 4ನೇ ವರದಿ.
4. ಪತ್ರ ಸಂಖ್ಯೆ : ಆಇ 09 ಬಿಪಿಎ 1999, ದಿನಾಂಕ : 13-02-2015.
5. ಆರ್ಥಿಕ ಇಲಾಖೆಗೆ ಸಂಬಂಧಿಸಿದ 13ನೇ ವಿಧಾನ ಸಭೆಯ 13ನೇ ವರದಿಯಲ್ಲಿನ ಶಿಫಾರಸ್ಸುಗಳ ಮೇಲೆ ಕೈಗೊಂಡಿರುವ ಅನುಸರಣಾ ಕ್ರಮದ ಬಗ್ಗೆ ದಿನಾಂಕ : 20-07-2015ರಂದು ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿಯು ವಿಧಾನ ಸಭೆಗೆ ಸಲ್ಲಿಸಿರುವ ವರದಿ.

**ಪ್ರಸ್ತಾವನೆ :**

ಪ್ರಸಕ್ತ ವರ್ಷಕ್ಕಾಗಿ ವೆಚ್ಚ ಮಾಡತಕ್ಕ ಮೊಬಲಗು ವೆಚ್ಚ ಮಾಡುವ ಉದ್ದೇಶಗಳಿಗೆ ಸಾಕಾಗದಿದ್ದರೆ ಅಥವಾ ಆ ವರ್ಷದ ವಾರ್ಷಿಕ ವಿತ್ತ ನಿರೂಪಣೆಯಲ್ಲಿ ಸೇರಿಸದ "ಹೊಸ ಸೇವೆ"ಗಾಗಿ ಪ್ರಸಕ್ತ ವರ್ಷದಲ್ಲಿ ಪೂರಕ ಅಥವಾ ಹೆಚ್ಚಿನ ವೆಚ್ಚದ ಅವಶ್ಯಕತೆ ಉಂಟಾದಲ್ಲಿ ಅಂದಾಜು ಮಾಡಿದ ವೆಚ್ಚದ ಮೊಬಲಗನ್ನು ಸೂಚಿಸುವ ಮತ್ತೊಂದು ವಿವರಣೆಯನ್ನು ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸಲು ಭಾರತದ ಸಂವಿಧಾನದ 205 (1)(a) ಅನುಚ್ಛೇದವು ಅವಕಾಶ ಮಾಡಿಕೊಡುತ್ತದೆ. " ಹೊಸ ಸೇವೆ" ಪ್ರಸ್ತಾವನೆಯು ಸಂವಿಧಾನದ 115(1)(a) ಅನುಚ್ಛೇದದಲ್ಲಿಯೂ ಸಹ ಪ್ರಸ್ತಾಪಿಸಲ್ಪಟ್ಟಿದೆ. ಸಂವಿಧಾನದಲ್ಲಿ "ಹೊಸ ಸೇವೆ" ಪದದ ಉಲ್ಲೇಖವಿದ್ದರೂ ಅದರ ಬಗ್ಗೆ ಸಂವಿಧಾನದಲ್ಲಿ ಎಲ್ಲಿಯೂ ವಿವರಣೆ ಇರುವುದಿಲ್ಲ. " ಹೊಸ ಸೇವೆ " ಮೇಲಿನ ವೆಚ್ಚದ ವ್ಯಾಪ್ತಿ ಮತ್ತು ಅರ್ಥವನ್ನು ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿಯ ಅನುಮೋದನೆಯೊಡನೆ ರಾಜ್ಯ ಸರ್ಕಾರವೇ ತೀರ್ಮಾನಿಸಬೇಕಾಗುತ್ತದೆ.

ಸ್ಥೂಲವಾಗಿ ಒಂದು ಹೊಸ ಕಾರ್ಯಕ್ರಮ ಅಥವಾ ಒಂದು ಹೊಸ ವಿಧಾನದ ಬಂಡವಾಳ ಹೂಡಿಕೆಯನ್ನೊಳಗೊಂಡು ಒಂದು ಹೊಸ ಕಾರ್ಯನೀತಿ ನಿರ್ಣಯ (ಈ ಮೊದಲೇ ವಿಧಾನ ಮಂಡಲದ ಅವಗಾಹನೆಗೆ ತರದೇ ಇರುವ) ದಿಂದ ಸಂಚಿತ ನಿಧಿಯಿಂದ ಮಾಡಲಾಗುವ ವೆಚ್ಚವನ್ನು "ಹೊಸ ಸೇವೆ"ಯ ಒಂದು ಬಾಬು ಎಂದು ಪರಿಗಣಿಸಲಾಗುವುದು. ಅದೇ ರೀತಿಯಲ್ಲಿ ಜಾರಿಯಲ್ಲಿರುವ ಒಂದು ಕಾರ್ಯಕ್ರಮದ ಒಂದು ಪ್ರಮುಖ

ವಿಸ್ತರಣೆಯಿಂದ ಉಂಟಾಗುವ ಹೆಚ್ಚಿನ ಮೊತ್ತದ ವೆಚ್ಚವನ್ನು "ಹೊಸ ಸೇವೆಯ ಸಾಧನ" ವೆಂದು ಪರಿಗಣಿಸಲಾಗುವುದು. "ಹೊಸ ಸೇವೆಯ ಸಾಧನ"ವು "ಹೊಸ ಸೇವೆ" ಯಿಂದ ಸ್ವಲ್ಪ ಭಿನ್ನವಾಗಿದ್ದರೂ, ಜಾರಿಯಲ್ಲಿರುವ ಕಾರ್ಯಕ್ರಮವನ್ನು ವಾರ್ಷಿಕ ವಿತ್ತ ನಿರೂಪಣೆಯಲ್ಲಿ ಸೇರಿಸಿದ್ದರೂ ಮತ್ತು ಅವಕಾಶ ಒದಗಿಸಿದ್ದರೂ ಸಹ ರೂಢಿಯಲ್ಲಿ "ಹೊಸ ಸೇವೆ"ಗೆ ಅನ್ವಯವಾಗುವಂತಹ ನಿರ್ಬಂಧಗಳಿಗೆ ಒಳಪಟ್ಟಿರುತ್ತದೆ.

"ಹೊಸ ಸೇವೆ"ಗಳ ಮಾನದಂಡಗಳನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಿಗದಿಗೊಳಿಸಲಾಗಿತ್ತು. 28 ವರ್ಷಗಳ ಹಿಂದೆ ನಿಗದಿಗೊಳಿಸಲಾಗಿದ್ದ ಈ ಆರ್ಥಿಕ ಮಿತಿಯನ್ನು ಸದ್ಯದ ಪರಿಸ್ಥಿತಿಗನುಗುಣವಾಗಿ ಮತ್ತು ಹೆಚ್ಚಿಸುವ ಕಾರಣದಿಂದ ಪರಿಷ್ಕರಿಸಬೇಕಾಗಿದೆ. ಮೇಲೆ (2)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಆರ್ಥಿಕ ಇಲಾಖೆಯು ಹೊಸ ಸೇವೆಗಳಿಗಾಗಿ ಆರ್ಥಿಕ ಮಿತಿಯನ್ನು ಹೆಚ್ಚಿಸಿ ಪರಿಷ್ಕರಿಸಲು ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿಯ ಅನುಮೋದನೆ ಕೋರಲಾಯಿತು.

ಮೇಲೆ (3)ರಲ್ಲಿ ಓದಲಾದ ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿಯ 14ನೇ ವಿಧಾನ ಸಭೆಯ 4ನೇ ವರದಿಯಲ್ಲಿ ಹೊಸ ಸೇವೆಗಳು/ಹೊಸ ಸೇವಾ ಸಾಧನೆಗಳಿಗಾಗಿರುವ ಆರ್ಥಿಕ ಮಿತಿಯ ಮಾನದಂಡಗಳನ್ನು ಹೆಚ್ಚಿಸಿ ಪರಿಷ್ಕರಿಸಲು ಅನುಮತಿಸಿ, ವರದಿಯನ್ನು ವಿಧಾನ ಸಭೆಗೆ ದಿನಾಂಕ : 18-12-2014ರಂದು ಸಲ್ಲಿಸಿರುತ್ತದೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆಯವರು 8ನೇ ವಿಧಾನ ಸಭೆಯ ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿಯ 22ನೇ ವರದಿಯ ಕಂಡಿಕೆ 10ರಲ್ಲಿ ಹೊಸ ಸೇವೆ/ ಹೊಸ ಸೇವಾ ಸಾಧನದ ಮೇಲಿನ ವೆಚ್ಚವು ನಿಗದಿಪಡಿಸಿದ ಮಿತಿಗಿಂತ ಹೆಚ್ಚಾಗಿದ್ದಲ್ಲಿ ವಿಧಾನ ಮಂಡಲದ ಪೂರ್ವಾನುಮೋದನೆ ಅಗತ್ಯವೆಂದು ಶಿಫಾರಸ್ಸು ಮಾಡಿರುವುದನ್ನು ಪರಿಗಣಿಸುವಂತೆ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯನ್ನು ಕೋರಿರುತ್ತಾರೆ.

ದಿನಾಂಕ : 20-07-2015ರಂದು ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ವಿಧಾನ ಸಭೆಗೆ ಸಲ್ಲಿಸಲಾದ ತನ್ನ 5ನೇ ವರದಿಯಲ್ಲಿ (14ನೇ ವಿಧಾನ ಸಭೆ) ಮೇಲಿನ ಪ್ರಸ್ತಾವನೆಗೆ ಅನುಮತಿ ನೀಡಿರುತ್ತದೆ ಮತ್ತು ಹೊಸ ಸೇವೆಗಳಿಗಾಗಿರುವ ಮಾನದಂಡಗಳ ಆರ್ಥಿಕ ಮಿತಿಯೊಳಗೆ ಅನಿರೀಕ್ಷಿತ ಹಾಗೂ ಅತ್ಯಾವಶ್ಯಕ ಸಂದರ್ಭಗಳಲ್ಲಿ ಹೆಚ್ಚುವರಿ ಅನುದಾನಗಳನ್ನು ಬಿಡುಗಡೆಗೊಳಿಸಬಹುದೆಂದೂ ಮತ್ತು ಬಿಡುಗಡೆಗೊಂಡಂತಹ ಹೆಚ್ಚುವರಿ ಅನುದಾನಗಳನ್ನು ಮುಂಬರುವ ನಿಕಟ ಅಧಿವೇಶನದಲ್ಲಿ ಪೂರಕ ಅನುದಾನದ ಮುಖಾಂತರ ವಿಧಾನ ಮಂಡಲದ ಅನುಮೋದನೆ ಪಡೆಯಲು ಅನುಮತಿಸಿರುತ್ತದೆ.

ಇಲಾಖೆಗಳು ಹೊಸ ಸೇವೆಗಳಿಗಾಗಿನ ಪರಿಷ್ಕೃತ ಮಿತಿಯನ್ನು ಹೆಚ್ಚುವರಿಗಳ ಮುಖಾಂತರ ಅನುದಾನ ಬಿಡುಗಡೆಗೊಳಿಸುವುದನ್ನು ಮತ್ತು ಸದರಿ ಬಿಡುಗಡೆಗೊಂಡ ಹೆಚ್ಚುವರಿಗಳನ್ನು ಪೂರಕ ಅಂದಾಜುಗಳ ಮುಖಾಂತರ ಸಕ್ರಮೀಕರಣಗೊಳಿಸುವುದನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಇ 14 ಬಿಪಿಎ 2015, ಬೆಂಗಳೂರು, ದಿನಾಂಕ : 6ನೇ ಆಗಸ್ಟ್ 2015.**

"ಹೊಸ ಸೇವೆ"ಗಳಿಗಾಗಿನ ಮಾನದಂಡಗಳ ವ್ಯಾಪ್ತಿಯಲ್ಲಿ ಬರದೇ ಇರುವ ವೆಚ್ಚಗಳನ್ನು ಆದೇಶದ ಅನುಬಂಧ-'ಎ'ರಲ್ಲಿ ವಿವರಿಸಲಾಗಿದೆ. ಆದಾಗ್ಯೂ, ಈ ಎಲ್ಲಾ ಪ್ರಕರಣಗಳಲ್ಲಿ ಮುಂಬರುವ ನಿಕಟ ಪೂರಕ ಅಂದಾಜುಗಳ ಮೂಲಕ ಅವಕಾಶಗಳನ್ನು ಮಾಡಿಕೊಳ್ಳತಕ್ಕದ್ದು. ಆದರೆ ಅಂತಿಮ/ಕೊನೆಯ ಪೂರಕ ಅಂದಾಜುಗಳ ಮಂಡನೆಯ ನಂತರ ಪಡೆಯಲಾಗುವ ಭಾರತ ಸರ್ಕಾರದ ಅನುದಾನಗಳು/ಸಾಲಗಳ ಪ್ರಕರಣಗಳಲ್ಲಿ ರಾಜ್ಯದ ಪಾಲನ್ನೂ ಒಳಗೊಂಡಂತೆ ಆಯವ್ಯಯದಲ್ಲಿ ಅಥವಾ ಪೂರಕ ಅಂದಾಜುಗಳಲ್ಲಿ ಯಾವುದೇ ಆಯವ್ಯಯ ಅವಕಾಶಗಳಿಲ್ಲದಿದ್ದಾಗ್ಯೂ ಅನುದಾನಗಳನ್ನು ಬಿಡುಗಡೆಗೊಳಿಸತಕ್ಕದ್ದು. ಯಾವುದೇ ಸಾಂಕೇತಿಕ ಅನುದಾನವನ್ನು ಒದಗಿಸಿರದಿದ್ದರೂ, ಎಷ್ಟೇ ಮೊತ್ತವನ್ನು ಒಳಗೊಂಡಿದ್ದರೂ, ಚಾಲ್ತಿಯಲ್ಲಿರುವ ವಿಧಿ-ವಿಧಾನಗಳ ರೀತ್ಯಾ ಲಭ್ಯವಿರುವ ಉಳಿತಾಯದಿಂದ ಪುನರ್ವಿನಿಯೋಗದ ಮೂಲಕ ಭರಿಸಲಾಗುವ ಯಾವುದೇ ನಗದು ಮೊತ್ತವು ಹೊರಹೋಗದಂತ ಪುಸ್ತಕ ಹೊಂದಾಣಿಕೆ ಪ್ರಕರಣಗಳಿಗೆ ಇದೇ ವಿಧಾನವು ಅನ್ವಯವಾಗುವುದು.

2) ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ನಿಗದಿಗೊಳಿಸಿರುವ ಆಧಾರದ ಮೇಲೆ "ಹೊಸ ಸೇವೆಗಳ" ವೆಚ್ಚಗಳೆಂದು ಪರಿಗಣಿಸುವ ಮಾನದಂಡಗಳನ್ನು ಆದೇಶದ ಅನುಬಂಧ-'ಬಿ'ರಲ್ಲಿ ವಿವರಿಸಿದೆ.

3) ವಾರ್ಷಿಕ ವಿತ್ತ ನಿರೂಪಣೆಯಲ್ಲಿ ಸೇರಿಸದಿರುವ ವೆಚ್ಚದ ಒಂದು ನಿರ್ದಿಷ್ಟ ಬಾಬು "ಹೊಸ ಸೇವೆಯೇ" ಅಥವಾ ಅಲ್ಲವೇ ಎಂಬುದನ್ನು ನಿರ್ಧರಿಸಲು ಪರಿಷ್ಕೃತ ಮಾನದಂಡವನ್ನು ಅನುಸರಿಸತಕ್ಕದ್ದು.

4) ವೆಚ್ಚವು ನಿಗದಿಗೊಳಿಸಿದ ಮಿತಿಯನ್ನು ಮೀರುತ್ತಿದ್ದಲ್ಲಿ, ಪೂರಕ ಅಂದಾಜುಗಳ ಮೂಲಕ ವಿಧಾನ ಮಂಡಲದ ಪೂರ್ವಾನುಮೋದನೆ ಪಡೆದು ಅಥವಾ ತುರ್ತಿನ ಸಂದರ್ಭದಲ್ಲಿ ಪೂರಕ ಅಂದಾಜಿನ ಮೂಲಕ ಮರುಭರ್ತಿ ಮಾಡುವುದನ್ನು ಬಾಕಿ ಇಟ್ಟು ಭಾರತ ಸಂವಿಧಾನದ ಅನುಚ್ಛೇದ 267 (2)ರ ಮೇರೆಗೆ ಸ್ಥಾಪಿತವಾದ "ಸಾದಿಲ್ವಾರು ನಿಧಿ" ಯಿಂದ ಮುಂಗಡವನ್ನು ಪಡೆದು ವೆಚ್ಚ ಮಾಡತಕ್ಕದ್ದು.

5) ಅಸಾಧಾರಣ ಸನ್ನಿವೇಶಗಳಲ್ಲಿ ಅತ್ಯಂತ ತುರ್ತು ಹಾಗೂ ಅನಿವಾರ್ಯ ಸಂದರ್ಭಗಳಲ್ಲಿ "ಹೊಸ ಸೇವೆ/ಹೊಸ ಸೇವಾ ಸಾಧನ"ಗಳಿಗಾಗಿನ ಪರಿಷ್ಕೃತ ಮಿತಿಯೊಳಗೆ ಹೆಚ್ಚುವರಿ ಆದೇಶಗಳ ಮೂಲಕ ವೆಚ್ಚವನ್ನು ಖರ್ಚು ಮಾಡಲು ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ಶಿಫಾರಸ್ಸು ಮಾಡಿದೆ. ಆದಾಗ್ಯೂ, ಇಂತಹ ಹೆಚ್ಚುವರಿ ಆದೇಶದ ಮೂಲಕ ಬಿಡುಗಡೆಗೊಳಿಸಿದ ಮೊತ್ತವನ್ನು ಮುಂಬರುವ ಪೂರಕ ಅಂದಾಜುಗಳ ಮೂಲಕ ಪುರಸ್ಕೃತಗೊಳಿಸತಕ್ಕದ್ದು.

6) ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ನಿಗದಿಗೊಳಿಸಿರುವಂತೆ ಹೊಸ ಸೇವೆ/ಹೊಸ ಸೇವಾ ಸಾಧನ"ಗಳಿಗಾಗಿನ ಪರಿಷ್ಕೃತ ಆರ್ಥಿಕ ಮಿತಿಯ ಮಾನದಂಡದೊಳಗೆ ಮೊತ್ತವನ್ನು ಹೆಚ್ಚುವರಿ ಆದೇಶಗಳ ಮೂಲಕ ಬಿಡುಗಡೆಗೊಳಿಸುವ ಕುರಿತು ಕರ್ನಾಟಕ ಆಯವ್ಯಯ ಕೈಪಿಡಿ-1957ಕ್ಕೆ ಸೂಕ್ತ ತಿದ್ದುಪಡಿಯನ್ನು ಹೊರಡಿಸಲಾಗುವುದು.

7) "ಹೊಸ ಸೇವೆ/ಹೊಸ ಸೇವಾ ಸಾಧನ"ಗಳಿಗಾಗಿನ ಪರಿಷ್ಕೃ ಆರ್ಥಿಕ ಮಿತಿಯ ಮಾನದಂಡಗಳು 2015-16ನೇ ಸಾಲಿನ ಆರ್ಥಿಕ ವರ್ಷದಿಂದ ಜಾರಿಗೆ ಬರುವುದು.

8) "ಹೊಸ ಸೇವೆ"ಗಳಿಗಾಗಿನ ಪರಿಷ್ಕೃತ ಆರ್ಥಿಕ ಮಿತಿಯ ಮಾನದಂಡವು ಉಲ್ಲಂಘನೆಯಾದಲ್ಲಿ ಭಾರತದ ಲೆಕ್ಕ ನಿಯಂತ್ರಕರು ಮತ್ತು ಲೆಕ್ಕಪರಿಶೋಧಕರ ಧನವಿನಿಯೋಗ ಲೆಕ್ಕಗಳು ಮತ್ತು ರಾಜ್ಯ ಹಣಕಾಸಿನ ವರದಿಗಳಲ್ಲಿ ಆಕ್ಷೇಪಣೆಯಾಗುವುದರಿಂದ ಸರ್ಕಾರದ ಎಲ್ಲಾ ಆಡಳಿತ ಇಲಾಖೆಗಳ ಆಂತರಿಕ ಆರ್ಥಿಕ ಸಲಹೆಗಾರರುಗಳು ಮತ್ತು ಇಲಾಖಾ ಮುಖ್ಯಸ್ಥರುಗಳು ಪರಿಷ್ಕೃತ ಮಿತಿಗಳು ಉಲ್ಲಂಘನೆಯಾಗದಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೀಪ್ತಿ ಆದಿತ್ಯ ಕಾನಡೆ**

ಉಪ ಕಾರ್ಯದರ್ಶಿ (ಆ ಮತ್ತು ಸಂ)

ಆರ್ಥಿಕ ಇಲಾಖೆ

**ಅನುಬಂಧ–"ಎ"**

**ಅ) ಹೊಸ ಸೇವೆಯ ಮಾನದಂಗಳಿಗಾಗಿ ಅನ್ವಯಗೊಳ್ಳದಿರುವ ವೆಚ್ಚಗಳು.**

1) ಪ್ರಕೃತಿ ವಿಕೋಪಗಳ ಸಂದರ್ಭಗಳಲ್ಲಿ ಇತರೆ ಸರ್ಕಾರಗಳಿಗೆ ನೀಡುವ ಅನುದಾನಗಳು ಮತ್ತು ವಂತಿಗೆಗಳು.

2) ವೇತನ ಆಯೋಗ/ ಸರ್ಕಾರದಿಂದ ರಚಿತವಾದ ಸಮಿತಿಯ ಶಿಫಾರಸ್ಸುಗಳನ್ವಯ ಸಾಮಾನ್ಯ ಪರಿಷ್ಕರಣೆಯು ಒದಗಿ ಬಂದಾಗ ನೀಡುವ ಪರಿಷ್ಕೃತ ವೇತನ ಶ್ರೇಣಿಗಳು.

3) ಬಡ್ಡಿ ಸಂದಾಯಗಳು.

4) ಭಾರತ ಸರ್ಕಾರ/ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಮರು ಸಂದಾಯ ಮಾಡುವ ಸಾಲಗಳು/ಅರ್ಥೋಪಾಯ ಮುಂಗಡಗಳು.

5) ನ್ಯಾಯಾಲಯಗಳ ಆದೇಶಗಳ/ನ್ಯಾಯಾಜ್ಞೆಗಳ ಮೇಲೆ ಮಾಡುವ ಸಂದಾಯಗಳು.

6) ಚಾಲ್ತಿ ಸೇವೆಯ ಮೇಲಿನ ವೆಚ್ಚವು ಒಂದು ಉದ್ದೇಶಿತ ಲೆಕ್ಕ ಶೀರ್ಷಿಕೆಯಡಿ ಇದ್ದು ಆದರೆ ವೆಚ್ಚಗಳ ವರ್ಗೀಕರಣದ ಬದಲಾವಣೆಯಿಂದಾಗಿ ಇತರೇ ಉದ್ದೇಶಿತ ಲೆಕ್ಕ ಶೀರ್ಷಿಕೆಗಳಡಿ ಬರುವ ವೆಚ್ಚಗಳು.

7) ಪ್ರಭೃತ ವೆಚ್ಚಗಳ ಎಲ್ಲಾ ಬಾಬುಗಳು

8) ಉದ್ದೇಶಿತ ವೆಚ್ಚಗಳಿಗಾಗಿ ರಾಜ್ಯದ ಆಯವ್ಯಯದಲ್ಲಿ ಅವಕಾಶ ಮಾಡಿಕೊಂಡಿರುವ ಭಾರತ ಸರ್ಕಾರದಿಂದ ಪಡೆಯಲಾಗುವ ಮೊತ್ತಗಳ ಎಲ್ಲಾ ಪ್ರಕರಣಗಳು.

9) ಚಾಲ್ತಿಯಲ್ಲಿರುವ ವಿಧಿ ವಿಧಾನಗಳ ರೀತ್ಯಾ ಯಾವುದೇ ಮೊತ್ತವು ಹೊರಹೋಗದಂತೆ ಉಳಿತಾಯಗಳಲ್ಲಿ ಲಭ್ಯವಿರುವ ಮೊತ್ತವನ್ನು ಮನರ್ವಿನಿಯೋಗದ ಮೂಲಕ ಭರಿಸಲಾಗುವ ಮಸ್ತಕ ಹೊಂದಾಣಿಕೆಗಳ ಎಲ್ಲಾ ಪ್ರಕರಣಗಳು.

**ಅನುಬಂಧ–"ಬಿ"**

**ಆ) ವೆಚ್ಚವನ್ನು "ಹೊಸ ಸೇವೆ" ಎಂದು ಪರಿಗಣಿಸುವುದಕ್ಕೆ ಮಾನದಂಡ.**

| | |
|---|---|
| 1) ಈಗಾಗಲೇ ಆಯವ್ಯಯದಲ್ಲಿ ಒದಗಿಸಲಾಗಿರುವ ಮತ್ತು ವಿಧಾನ ಮಂಡಲದಿಂದ ಅನುಮೋದಿತವಾಗಿರುವ ಆದರೆ ತರುವಾಯ ಆಯವ್ಯಯದಲ್ಲಿನ ಮೂಲ ಮೊತ್ತಕ್ಕಿಂತ ಹೆಚ್ಚಾಗುವ ಸಾಧ್ಯತೆಯಿರುವ ಪ್ರಕರಣಗಳು | ಯಾವುದೇ ಪ್ರಕರಣದಲ್ಲಿ ಆಯವ್ಯಯದಲ್ಲಿ ಒದಗಿಸಿರುವ ವಾಸ್ತವಿಕ ಮೊಬಲಗಿಗಿಂತ ವೆಚ್ಚವು ಎರಡರಷ್ಟು ಹೆಚ್ಚಾಗದಿದ್ದರೆ ಅಥವಾ 500.00 ಲಕ್ಷ ರೂ.ಗಳಿಗಿಂತ ಮೀರದಿದ್ದರೆ ಇವುಗಳಲ್ಲಿ ಯಾವುದು ಅಧಿಕವೋ ಅದನ್ನು "ಹೊಸ ಸೇವೆ" ಎಂದು ಪರಿಗಣಿಸಲಾಗುವುದಿಲ್ಲ. |

**ದೀಪ್ತಿ ಆದಿತ್ಯ ಕಾನಡೆ**

ಉಪ ಕಾರ್ಯದರ್ಶಿ (ಆ ಮತ್ತು ಸಂ)

ಆರ್ಥಿಕ ಇಲಾಖೆ

## FINANCE SECRETARIAT

Sub : Revision of Criteria for' New Service'

Read: (1) Order No. FD 10 BUD 1984 dated 16th October 1987.

(2) D.O. Letter No. FD 05 BPA 1999 dated 14th September 2010.

(3) Fourth Report Fourteenth Assembly of the Public Accounts Committee recommendations on Revision of Criteria for' New Service'/'New Instrument of Service' submitted to Assembly on 18-12-2014.

(4) letter No. FD 09 BPA 1999 dated 13th Feb 2015.

(5) Fifth Report [Fourteenth Assembly] of the Public Account Committee regarding action taken on the 13th Report [Thirteenth Assembly] recommendations by the Finance Department submitted to Assembly on 20-07-2015.

**PREAMBLE :**

Article 205(1)(a) of the Constitution envisages that when a need arises during a financial year for Supplementary or additional expenditure upon 'NEW SERVICE' not contemplated in the Annual Financial Statement for that year, another statement showing the

estimated amount of that expenditure is required to be laid before the State legislature. The term 'NEW SERVICE' also occurs in Article 115(1)(a) of the Constitution. Though the term 'NEW SERVICE' is referred to in the Constitution, it has not been defined anywhere in the Constitution. The scope and meaning of the term 'Expenditure on New Service' was left to be decided by the State Government with the approval of the Public Accounts Committee.

Broadly, expenditure from the Consolidated Fund arising out of a new policy decision [not brought out to the notice of the Legislature earlier] including a new activity or a new form of investment is regarded as an item of 'NEW SERVICE'. Likewise, relatively large expenditure arising out of an important expansion of an existing activity is treated as 'NEW INSTRUMENT OF SERVICE'. The latter though slightly different from 'NEW SERVICE' is in practice subjected to the same restrictions as applicable to 'NEW SERVICE' although the existing activity might have otherwise been contemplated and provided for in the Annual Financial Statement.

The criteria for 'NEW SERVICE' was prescribed last in GO read at (1) above. The monetary limits fixed about 28 years back required revision in view of the prevailing conditions and desired upward revision. Finance Department in DO Letter read at (2) above proposed upward revision of the limits and its approval by the Public Accounts Committee.

The Public Account Committee in its Fourth Report of the Fourteenth Assembly read at (3) above approved the upward revision of limits on revised criteria for 'NEW SERVICE/NEW INSTRUMENT OF SERVICE' and submitted the Report to the Assembly on 18$^{th}$ December 2014.

The Principal Secretary, Finance Department in letter read at (4) above requested the Public Accounts Committee to consider the recommendations of the Committee on Public Accounts in the Twenty Second Report [Eight Assembly] on expenditure on new service/new instrument of service in para 10 that prior approval of Legislature would be necessary when the expenditure involved is beyond the limits laid down.

The Public Accounts Committee in its Fifth Report [Fourteenth Assembly submitted to the Assembly on 20$^{th}$ July 2015 has agreed to the above proposal and has given approval to release additionalities in extra ordinary cases of emergent or inevitable necessities within the limits laid down for 'NEW SERVICE' criteria subject to approval of the additionalities in the subsequent Supplementary Estimates by the Legislature.

The revised limits for 'NEW SERVICE', releases through additionalities, and regularisation through Supplementary Estimates have to be strictly followed by the departments.

Hence the Order.

**GOVERNMENT ORDER NO:FD 14 BPA 2015, BENGALURU, DATED: 06$^{TH}$ AUGUST 2015**

The items of expenditure for which 'NEW SERVICE' criteria shall not be applicable are detailed in the Annexure to the Order. However, provision shall be made in the subsequent Supplementary Estimates in all these cases. But, in case of Government of India grants/loans received after the last and final instalment of Supplementary Estimates, releases shall be made including State share to the implementing agencies even without provision of funds in Budget Estimates or Supplementary Estimates. Similar procedure shall apply to cases of book adjustmements without cash outflow irrespective of the amounts involved and even without token provision provided the expenditure can be met by re-appropriation of savings as per norms.

2. The criteria for treating the expenditure as 'NEW SERVICE' based on the limites fixed by the Public Accounts Committee are detailed in the Annexure to the Order.

3. The revised criteria shall be followed to decide whether a particular item of expenditure not contemplated in the Annual Financial Statement is on 'NEW SERVICE' or not.

4. Prior approval of the Legislature through Supplementary Estimates or in cases of urgency by getting advance from out of the Contingency Fund established under Article 267(2) of the Constitution pending recoupment through Supplementary Estimates shall be necessary when the expenditure involved is beyond the limits laid down.

5. In case where the expenditure is within the revised limits for 'NEW SERVICE/NEW INSTRUMENT OF SERVICE', the Public Accounts Committee has recommended for incurring expenditure through Additionality Orders in extra ordinary circumstances for emergent/immediate necessity cases. However, the releases through additionalities have to be got voted through provision in the subsequent Supplementary Estimates.

6. Amendment to Karnataka Budget Manual 1957, to bring in releases through additionalities within the limits laid down by the Public Accounts Committee on criteria for 'NEW SERVICE/NEW INSTRUMENT OF SERVICE', shall be issued in due course.

7. The revised criteria for 'NEW SERVICE' shall come into force from the financial year 2015-16.

8. The Internal Financial Advisers of the Administrative Departments and the Heads of the Departments shall strictly ensure that the conditions for 'NEW SERVICE' criteria are not violated as such violations will be commented in the Appropriation Accounts and the Report on State Finances by the C&AG of India.

By Order and in the name of the Governor of Karnataka

**DIPTI ADITYA KANADE**

Deputy Secretary (B & R),

Finance Department.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ANNEXURE -"A"**

**A. Expenditure for which 'NEW SERVICE' criteria shall not be applicable**

1. Grants and Contributions to other Governments for relief at the time of Natural Calamities.
2. Revision of Pay scales when there is general revision in pursuance of the recommendations of a Pay Commission/Committee consituted by the Government.
3. Interest Payments
4. Repayment of Loans/Ways and Means advances to Government of India/Reserve Bank of India
5. Payments on account of court decrees
6. Expenditure on existing services under one objet head but involving provision of funds under different object heads due to chage in classification of expenditure
7. All items of charged expenditure
8. All cases of provison to spend out of State Budget where the funds have been received from the Government of India for the proposed expenditure
9. All cases of book adjustments without cash outflow irresepctive of the amounts involved provided the expenditure can be met by re-appropriation of savings as per the norms.

**ANNEXURE-41B"**

**B. Criteria for treating the expenditure as 'NEW SERVICE'**

| | |
|---|---|
| Cases already provided for and approved by the Legislature but where expenditure is subsequently expected to exceed the amount originally provided in the Budget | These cases need not be treated as 'NEW SERVICE' provided the increase over the actual provision does not exceed twice the provision or Rs. 500 lakhs whichever is more. |

**DIPTI ADITYA KANADE**
Deputy Secretary (B & R),
Finance Department.

**P.R. 515**
**SC-500**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59